ಕವನಕೋಶ

ಒಂದು

# ನಾಳಿನ ಹಂಣು

(ನಾಳಿನ ಹಂಣಿನ ರಸವಿಲ್ಲಿಯ ಮಕರಂದದೊಳಡಗಿಹುದು)



ನೆಗಳೂರ ರಂಗನಾಥ



ಆನಂದಮಧುವಿಜಯ ಬಂಧು

ಸಾಧನಕೇರಿ, ಧಾರವಾಡ

# ಮುನ್ನುಡಿ

'ನೆರಂಗ' ರೆಂದು ಪ್ರಸಿದ್ಧರಾಗಿರುವ ಶ್ರೀ ನೆಗಳೂರ ರಂಗನಾಥರ ಕವಿತೆಗಳ ಈ ಪ್ರಥಮ ಸಂಗ್ರಹಕ್ಕೆ ನನ್ನೆರಡು ಮಾತು ಜೋಡಿಸಬೇಕೆಂದು ಕವಿಗಳೇ ಸೂಚಿಸಿದರು. ನನ್ನನ್ನು ಕುರಿತೂ ಈ ಸಂಗ್ರಹದಲ್ಲಿ ಒಂದು ಪದ್ಯ ವಿದೆ. ಇದಲ್ಲದೆ, ನನ್ನ ಕವಿಜೀವನವನ್ನು ಕುರಿತು ಒಂದು ಚರಿತ್ರಾತ್ಮಕ ಗ್ರಂಥ ಬರೆಯುವ ಅಭಿಲಾಷೆಯನ್ನು ಅವರು ಬಹಳ ವರುಷಗಳಿಂದ ತಾಳಿದ್ದು ಅದರ ಒಂದು ಅರ್ಧ ಪ್ರಕರಣವನ್ನು ಪ್ರಕಟಿಸಿ ಚಂಚಗಾರ ಕೊಟ್ಟಿದ್ದಾರೆ; ತಮ್ಮ ಲೇಖನದ ಬಗ್ಗೆ ನನ್ನ ಅಭಿಪ್ರಾಯವನ್ನು ಕೇಳುವುದು ಇದೇನು ಮೊದಲನೆಯ ಸಲವಲ್ಲ; ಅಭಿಪ್ರಾಯವನ್ನು ಕೂಡ ಹೇಳಲು ಹಿಂದು ಮುಂದು ನೋಡುವುದು ನನ್ನ ಸ್ವಭಾವವೂ ಅಲ್ಲ— ಹೀಗೆ ಅನೇಕ ಪ್ರಕಾರದ ಋಣಾನುಬಂಧದಿಂದ ಈ ಚಿಕ್ಕ ಸಂಗ್ರಹಕ್ಕೆ ಚಿಕ್ಕದಾದ ಮುನ್ನುಡಿ ಬರೆಯುತ್ತಿದ್ದೇನೆ.

ಇಲ್ಲಿ 'ಚುಟುಕು-ಗಿಟುಕು' ಎಲ್ಲ ಹಿಡಿದು ಮೂವತ್ತು* ಕೃತಿಗಳಿವೆ. ಬರೆದ ಕಾಲ ಸುಮಾರು ಹತ್ತು ಹನ್ನೊಂದು ವರ್ಷ: ೧೯೪೧ರಿಂದ ೧೯೫೧ರ ವರೆಗೂ. ಈ ವರೆಗೆ ಶ್ರೀ ನೆಗಳೂರ ಅವರು ಐದು ಗ್ರಂಥಗಳನ್ನು ಪ್ರಕಾಶ ಗೊಳಿಸಿದ್ದು ಇನ್ನು ಹತ್ತು ಹನ್ನೆರಡು ಸಿದ್ಧವಾಗಿವೆಯೆಂದು ಪ್ರಕಟಿಸಿದ್ದಾರೆ. ಇಂಥ ಶಕ್ತಿವಂತರ ಈ ಕವಿತೆಗಳ ಸಂಖ್ಯೆ ಅವರ ಸಹಜಪ್ರಕೃತಿ ಪದ್ಯದ ಜಾತಿಯದಲ್ಲ ಎಂದು ತೋರಿಸುವುದು. ಇತ್ತೀಚೆ ಯಾವ ಸಾಹಿತಿಯೂ ಯಾವುದೇ ಸಾಹಿತ್ಯರೂಪದಲ್ಲಿಯೂ ರಚನೆ ಮಾಡಬಲ್ಲ ಎಂಬುದು ಅನೇಕರ ಕೃತಿಗಳಿಂದ ಸಿದ್ಧವಾಗಿರುವುದು. ಶ್ರೀ ನೆಗಳೂರ ರಂಗನಾಥರೂ ತಮ್ಮ ಪದ್ಯ ಕೃತಿಗಳ ಸಂಕಲನವನ್ನು ತಮ್ಮ ಕವನಕೋಶದ ಮೊದಲ ಸಂಪುಟವೆಂದು ಹೇಳಿ, ಬೇರೆ ಸಂಕಲನಗಳು ಬಂದಾವು ಎಂಬ ಭರವಸೆ ಕೊಡುತ್ತಿರುವುದು ತೀರ ಅಸಹಜವೇನೂ ತೋರುವುದಿಲ್ಲ. ಆದರೂ ಅವರ ಕೃತಿಯ ರಾಜ-ಮಾರ್ಗವು ಗದ್ಯ.

---

* ಪ್ರಕಟನೆಯ ಕಾರ್ಯ ಕಾರಣಾಂತರದಿಂದ ವಿಲಂಬವಾದುದರಿಂದ ಇನ್ನೂ ಕೆಲವು ಕವನಗಳನ್ನು ಸೇರಿಸಲಾಗಿದೆ.

‘ ಪರಾಗ ’ ಎಂಬ ಒಂದು ಕವನಸಂಗ್ರಹಕ್ಕೆ ನಾನು ‘ ಬಾ ಭೃಂಗವೆ ಬಾ’ ಎಂಬ ಪ್ರಾರಂಭಿಕ ಪದ್ಯ ಬರೆದೆ. “ ಕವನಕೋಶದೀ ಕಮಲ ಗರ್ಭದಲಿ ಪರಾಗ ಒರಗಿಹುದು-- ನಿನ್ನ ಮುಖ ಸ್ಪರ್ಶವೂ ಸಾಕು ಹೊಸ ಸೃಷ್ಟಿಯೆ ಬರಬಹುದು ” ಎಂದು ರಸಿಕರನ್ನುದ್ದೇಶಿಸಿ ಬರೆದೆ. ನನ್ನ ಮುನ್ನುಡಿಯ ಮುಖಸ್ಪರ್ಶ ತಮ್ಮ ಹಾಡಿನ ಹೂ-ಹುಡಿಗೆ ಆಗಲೆಂದು ಕವಿ ಬಯಸಿದ್ದಾರೆ. ಕವಿಯ ಪ್ರಥಮ ಪ್ರಯತ್ನಗಳಲ್ಲಿ—‘ ನಾಳಿನ ಹಣ್ಣಿನ ರಸವಿಲ್ಲಿಯ ಮಕರಂದ ದೊಳಡಗಿಹುದು. ’— ರಜಃಕಣಗಳೇನೊ ಇರುತ್ತವೆ. ಅವುಗಳಿಗೆ ವೀರ್ಯ ವತ್ತರವಾದ ಬಿಂದುಮಾತ್ರವಾದ ಸಂಯೋಗವೂ ಆದರೆ ಫಲಬರದೆ ಉಳಿಯದು. ಆ ಫಲವೆ ಕಾಲಾಂತರದಲ್ಲಿ ಬಾಳಿ, ಬೆಳೆದು, ಬದುಕಿ ಹಣ್ಣಾಗಿ ಮಧುರ ರಸವನ್ನು ಕೊಡುವುದು. ಆ ಘನವಾದ ಆಸೆಯನ್ನು ಶ್ರೀ ನೆಗಳೂರ ರಂಗನಾಥರು ಇಟ್ಟುಕೊಂಡಿದ್ದಾರೆ. ಅವರ ಆ ಆಸೆ ಫಲಿಸಿ ನನ್ನ ಸ್ಪರ್ಶ ವಿಫಲವಲ್ಲವೆನ್ನಿಸಿದರೆ ನನ್ನ ಪೌರುಷಕ್ಕೂ ಸಾರ್ಥಕತೆ ಬಂದೀತು.

ಶ್ರೀ ನೆಗಳೂರವರ ಸಹಜಪ್ರಕೃತಿ ಗದ್ಯ ಎಂದು ಹೇಳಿಯೂ ಅವರ ಪದ್ಯ ಫಲಿಸಲಿ ಎಂದು ಬಯಸುವಲ್ಲಿ ಅನೌಚಿತ್ಯವಿಲ್ಲ. ಯಾಕಂದರೆ ಒಳ್ಳೆಯ ಗದ್ಯಕ್ಕೂ ಒಳ್ಳೆಯ ಪದ್ಯಕ್ಕೂ ಸಮಾನ ಸಂಬಂಧ ಒಳ್ಳೆಯ ಸಾಹಿತ್ಯದಲ್ಲಿದೆ. ಇಲ್ಲಿ ಸಾಹಿತ್ಯಕ್ಕೆ ಬೇಕಾದ ಒಳ್ಳೆಯ ಗುಣಗಳಿವೆ. ನೀರಸ ಅಥವಾ ನಿರರ್ಥಕ ಮಾತುಗಳಿಲ್ಲ. ಏನನ್ನು ಹೇಳಬಹುದೊ ಅದನ್ನು ಚೊಕ್ಕಾಗಿ ಖೋವಾ ಬರ್ಫಿಯ ವಡಿಗಳನ್ನು ಕೊರೆದಂತೆ ಖಂಡತುಂಡಾಗಿ ಹೇಳಿದ್ದಾರೆ. ಸುಭಾಷಿತ ಗಳಿಗೆ ಇಂಥ ಖಂಡತುಂಡತನ, ಸ್ಪಷ್ಟತೆ, ಪ್ರಸಾದಗುಣ ಉಪಕಾರವಾಗುತ್ತದೆ. ಇದು ಒಳ್ಳೆಯ ಗದ್ಯದ ಗುಣವೂ ಹೌದು. ಆ ಗುಣವನ್ನೆ ಅವರು ಪದ್ಯ ಪ್ರಬಂಧಕ್ಕೂ ಹೊರಳಿಸಿ ಭಾವಾತಿರೇಕದಿಂದಲೋ ಕಲ್ಪನಾತಿಶಯದಿಂದಲೋ ಅಗಮ್ಯವಾಗುವ ಪದ್ಯಜಾತಿಯಿಂದ ಕವಿತೆಯನ್ನು ಬಿಡಿಸಿ ಹ್ಯಾಟು-ಬೂಟು-ಸೂಟು-ಕ್ರಾಪುಗಳಿಂದ ಠಾಕಂ-ಠೀಕಾಗಿ ಕಾಣುವ ಆಧುನಿಕ ವಿದ್ಯಾರ್ಥಿಯಂತೆ ಸಜ್ಜುಗೊಳಿಸಿದ್ದಾರೆ.

ಹನ್ನೊಂದು ವರುಷಗಳಲ್ಲಿ ಬರೆದ ಇಲ್ಲಿಯ ಮೂವತ್ತು ಕವನಗಳಲ್ಲಿ ಎಂಟು ಹತ್ತು ಜಾತಿಗಳಿವೆ. ಅನುವಾದಗಳು, ಆತ್ಮೀಯ, ವರ್ಣನಾತ್ಮಕ, ವಿಚಾರಾತ್ಮಕ, ಸಮಯ ಸಾಂದರ್ಭಿಕ; ಕೊನೆಗೆ—ಹಾಗೇ ಹುಡುಗಾಟದ ಉಕ್ತಿಗಳೂ ಇವೆ. ಹೇಳಿಕೊಳ್ಳುವಂಥ ಛಂದಸ್ಸಿನ ವೈವಿಧ್ಯವಿಲ್ಲವಾದರೂ

ಒಂದೆರಡು ಪ್ರಯೋಗಗಳು ವರ್ಣನೆಗಳಲ್ಲಿ ತಲೆದೋರಿವೆ. ಆತ್ಮೀಯ ಕವನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಉತ್ಕಟತೆಗಿಂತ ಇಲ್ಲಿ ಸಂಯಮತೆ ಹೆಚ್ಚಿದೆ. ನಗೆ 'ಹುಡುಗಾಟ'ದ ಮುಂದೆ ಬಹಳ ಹೋಗಿಲ್ಲ. ಶ್ರೀ ನೆಗಳೂರ ರಂಗನಾಥರ ಕವಿತೆಯ ವಿಶೇಷವು ಅವರ ವ್ಯಕ್ತಿವಿಶೇಷ ವರ್ಣನೆಯಲ್ಲಿಯೂ ಜೀವನತತ್ವ ವಿಮರ್ಶಾಲಹರಿಗಳಲ್ಲಿಯೂ ಕಂಡುಬರುವುದು. ಗಾದೆಮಾತು ಸುಭಾಷಿತಗಳ ಸತ್ವ ಇವುಗಳಲ್ಲಿದೆ. 'ಗಮಕಿ'ಯು ಕವಿತೆಯನ್ನು ಹಾಡಿದಾಗ ರಸಿಕರಲ್ಲಿ ಹೊಸದಾದ ಭಾವ ಮೂಡುವುದು ಎಂಬ ಮಾತನ್ನು 'ಬೆಳಕು ಬೆಳಕನು ತೋರೆ ಹೊಸ ಬೆಳಕು ಹುಟ್ಟುವುದು' ಎಂದು ಹೇಳುತ್ತಾರೆ ಕವಿ. ಕಲೆಗಾರನು 'ಜಗದ ಜೀವನವರಿತು ಜನಕೆ ಜೀವವ ಕೊಡುವ ಕಲಿ'ಯಾಗಿರುವುದರಿಂದ 'ಬಚ್ಚಿಡುವ ಜಿಪುಣತನ ದೂರಮಾಡು........ಬಚ್ಚಿಟ್ಟ ಬಾಳೆಲ್ಲ ಕೊರಡು—ಬರಡು' ಎಂದು ಅವನನ್ನು ಎಚ್ಚರಿಸಿರುವರು. ಶ್ರೀ ನೆಗಳೂರವರ ಕವನದಲ್ಲಿ ಅಗಾಧ, ಅಗಮ್ಯ, ಅತ್ಯುನ್ನತ, ಅತುಲ, ಎಂಬ ದ್ರವ್ಯವಿರದಿದ್ದರೂ ಬಚ್ಚಿಡದೆ ಕೊಡುವ ಔದಾರ್ಯವಿದೆ ಅವರ ಕಲೆಗಾರಿಕೆಯಲ್ಲಿ. ಆಗೀಗನ ಪದ್ಯಬಂಧದ ಬಿಗುವಿನಿಂದ ಮಾತಿನ ಕಿರಿದು ಅರ್ಥದ ಹಿರಿಮೆಯನ್ನು ಒತ್ತಿಕ್ಕಿಟ್ಟಂತೆ ಅಲ್ಲಲ್ಲಿ ತೋರಿದರೂ ಅದು ಅವರ ಶೈಲಿಯ ಸ್ವಭಾವವಲ್ಲ. ಇಂಥ ಸಾಹಿತಿಯ ಜೀವನಾನುಭವವು ಆಳವಾದಂತೆ ವಿಸ್ತಾರವಾದಂತೆ ಇಂದಿನ ಒಗರಿಳಿದು ನಾಳಿನ ಉಕ್ತಿ ರಸಮಯವಾದೀತೆಂದು ನಾನು ನಂಬುತ್ತೇನೆ.

೧೪–೪–೫೦
ಧಾರವಾಡ

ದ. ರಾ. ಬೇಂದ್ರೆ

## ಎರಡು ಮಾತು

ಶ್ರೀ. ನೆಗಳೂರ ರಂಗನಾಥರು ಕವಿಯಾಗಬೇಕೆಂದು ಬಯಸಿದುದು ಹತ್ತು ವರುಷದ ಹಿಂದೆ ಆದರೂ ಇಂದು ಈ ಕವನಸಂಕಲನವನ್ನು ಪ್ರಕಟಿಸಿ ಕನ್ನಡಿಗರೆದುರು ಹೊಸ ಕವಿಯೊಬ್ಬರಾಗಿ ನಿಂತಿದ್ದಾರೆ. ಇದು ಸಂತೋಷದ ಸಂಗತಿಯೆ.

ಪ್ರಪಂಚದ ಸಮಗ್ರ ಸೌಂದರ್ಯವನ್ನು ಕಂಡು ಆನಂದಪಡುವ ಹೃದಯ ಶ್ರೀ. ನೆಗಳೂರರಲ್ಲಿ ಇದೆಯೆಂಬುದನ್ನು ಬಲ್ಲೆನಾದರೂ ಆ ಸೌಂದರ್ಯವನ್ನು ಹಿಂಜಿ ಹಿಂಜಿ ಅದರ ರಹಸ್ಯವನ್ನು ಕಂಡುಹಿಡಿಯಬೇಕೆಂಬ ಕುತೂಹಲ ಬುದ್ಧಿಯನ್ನು ಬೆಳೆಸಿಕೊಂಡಿರುವುದನ್ನೂ ಬಲ್ಲೆ. ಅವರ ಇಲ್ಲಿಯ ಕವಿತೆಗಳಲ್ಲಿ ಎರಡರ ಕೈವಾಡವನ್ನು ಕಾಣಬಹುದಾದರೂ ಹೆಚ್ಚಾಗಿ ವಿಶ್ಲೇಷಣಾತ್ಮಕ ಬುದ್ಧಿಯ ಕಾರ್ಯಫಲ ಕಣ್ಣಿಗೆ ಬೀಳುವುದು.

ಜೀವನಾನುಭವದಿಂದ ತಲೆದೋರಿದ ಪ್ರಾಮಾಣಿಕ ಪ್ರಚೋದನೆಗಳೇ ಕವನಗಳಿಗೆ ಜೀವಾಳವೆನ್ನಿಸುವುವು. ಶ್ರೀಮಾನ್ ನೆಗಳೂರರ ಇಲ್ಲಿಯ ಕವನಗಳಿಗೆ ಅಂತಹ ಪ್ರಚೋದನೆಯ ಬಲ ಸಾಕಷ್ಟಿದೆ. ಕವಿತೆಯನ್ನು ಕಟ್ಟಿ ರೂಪಿಸಬೇಕಾದ ಭಾಷೆ–ಛಂದಸ್ಸುಗಳೂ ಕ್ರಮವಾಗಿ ಮೆರಗು ಪಡೆಯುತ್ತ ಹೋಗಿರುವುದು ಯಾರಿಗೂ ಗೊತ್ತಾಗುವಂತಿದೆ.

ಶ್ರೀ. ನೆಗಳೂರರು ಜೀವನ ಹೋರಾಟವನ್ನು ಪ್ರೀತಿಸುವವರು ಕರ್ಮ-ವಾದಿಗಳು. ಹೋರಾಟದಿಂದಲೆ ಬಾಳ ಗುರಿಯನ್ನು ಸಾಧಿಸುವ ನಂಬಿಗೆ-ಯುಳ್ಳವರು.

ಬಾಗಿಲಿಕ್ಕಿದೆಯೆಂದು ಮರುಗಬೇಡ !
ಬಾಗಿಲಿಗೆ ಕೈಯಿಹುದು ಹೆದರಬೇಡ !
ಎಲ್ಲವೂ ಇಹುದಿಲ್ಲಿ; ಮನವು ಬೇಕು
ಮನಸಿನಿಂದಲೆ ಮಾರ್ಗ ಪಡೆಯಬೇಕು.

ಎಂದು ಹೇಳಿರುವ ಇವರ ಮಾತಿನಲ್ಲಿ ಆ ನಂಬುಗೆಯ ಕೆಚ್ಚು ತುಂಬಿ ನಿಂತಿದೆ. ಈ ತರುಣ ಕವಿಯ ಜೀವನಾನುಭವ ಹೆಚ್ಚು ಹೆಚ್ಚಾಗಿ ರಸದಿಂದ ಕಳೆವಡೆದು ಕವನವಾಗಿ ಹರಿಯಲಿ.

ಧಾರವಾಡ
೧೬—೪—೫೧

**ಬೆಟಗೇರಿ ಕೃಷ್ಣಶರ್ಮ**

# ನನ್ನ ನುಡಿ

"ಏನಪಾ, ರಂಗಪ್ಪ, ನೀನೂ ಕವಿತಾ ಬರೀಲಿಕ್ಕೆ ಹತ್ತಿದೆಯಾ?" ಎಂದು ನನ್ನ ಗೆಳೆಯರು ಆಶ್ಚರ್ಯಪಟ್ಟು ಉಸುರಿದ್ದಾರೆ. ಗೆಳೆಯರಿಗೆ ಅಚ್ಚರಿಯಾದಂತೆ ನನಗೇ ಆಗಿದೆ. ಈ ಪದ್ಯದ ಗೊಂದಲಕ್ಕೆ ಸಹಸಾ ಬೀಳುವವ ನಾನಲ್ಲ. ಆದರೆ ಪ್ರಸಂಗ ಮೈಮೇಲೆ ಬಂದಾಗ ಎದುರಿಸಿ ನಿಂತಾಗ ಹೊರ ಹೊಮ್ಮಿದ ಮಾತು ಅಧಿಕಪ್ರಸಂಗವಾಗಲಾರದು. ಅಂತೆಯೆ ಕವನರಾಜ್ಯದಲ್ಲಿ ಕಾಲಿಟ್ಟೆ. ಆಗಾಗ ಬರೆದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಕಲನ ಮಾಡಿ ಮುಂಡಿಸಿದ್ದೇನೆ.

ನಾನೇನೋ ಅವುಗಳನ್ನು ಕವಿತೆಗಳೆಂದು ಬರೆದೆ. ಆದರೆ ಅವು ಕವಿತೆಗಳಾಗಬಹುದೇ ಎಂಬ ಸಂದೇಹ ಬಹುಕಾಲ ನನ್ನನ್ನು ಬಾಧಿಸಿದೆ. ಪ್ರಕಟನೆಯ ಮೊದಲು ಅವುಗಳಲ್ಲಿಯ ಗುಣವಿಶೇಷವನ್ನು ಕಂಡುಹಿಡಿಯಬೇಕೆಂದು ಖ್ಯಾತನಾಮ ಕವಿಗಳಿಗೆ ತೋರಿಸಿದೆ. ಇಷ್ಟೆ ಅಲ್ಲ, ಒಬ್ಬರಿಂದ ಮುನ್ನುಡಿ ಅಪೇಕ್ಷಿಸಿದೆ; ಇನ್ನೊಬ್ಬರಿಂದ ಅಭಿಪ್ರಾಯ ಅಪೇಕ್ಷಿಸಿದೆ. ಅವೆರಡೂ ಇಲ್ಲಿ ಮೂಡಿವೆ. ಅವುಗಳನ್ನು ಬರೆದು ಕೊಟ್ಟುದಕ್ಕಾಗಿ ಕವಿ ಶ್ರೀ ಬೇಂದ್ರೆಯವರಿಗೂ ಕವಿ ಶ್ರೀ ಬೆಟಗೇರಿ ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಅಲ್ಪಸ್ವಲ್ಪಾದರೂ ಗುಣವಿದೆ ಎಂಬ ಭರವಸೆ ಬಂದುದರಿಂದ ಪ್ರಕಟಿಸುವ ಸಾಹಸ ಮಾಡಿದ್ದೇನೆ.

ನನ್ನ ಜೀವನವೆ ಒಗರಿನದು: ಅದೇ ನನಗೆ ಸವಿ ಅನ್ನಿಸಿದೆ. ಒಗರಿನಲ್ಲಿಯೆ ಸವಿಪಡೆಯಬಹುದಾದವರಿಗೆ ಈ 'ನಾಳಿನ ಹಂಣು' ರುಚಿಸೀತು.

ಈ ಸಂಕಲನವು ಇಂದಿಗೆ ಒಂದು ವರುಷದ ಹಿಂದೆಯೆ ಪ್ರಕಟವಾಗಬೇಕಿತ್ತು. ಕಾರಣಾಂತರದಿಂದ ವಿಲಂಬವಾಯಿತು. ಪ್ರಕಟನೆಯ ಕಾರ್ಯದಲ್ಲಿ ನೆರವಾದ ಗೆಳೆಯ ಶ್ರೀ ಲ. ಜಿ. ಬೇಂದ್ರೆಯವರಿಗೂ ಗೆಳೆಯ ಶ್ರೀ ನಾಯಕ ವೆಂಕಟರಾಯರಿಗೂ ನನ್ನ ಕೃತಜ್ಞತೆಯ ವಂದನೆಗಳು.

ಶಾಂತಿರಂಗ
ಸಾಧನಕೇರಿ, ಧಾರವಾಡ
೨೭-೪-೫೨, ಅಕ್ಷಯತೃತೀಯೆ

**ನೆಗಳೂರ ರಂಗನಾಥ**

# ಪರಿವಿಡಿ

ತಾಯಿ

ಜಾನಕಿದೇವಿಗೆ

ಅರ್ಪಿತವಿದು

— **ರಂಗ**

# ಹುಡುಗಾಟ

( ಹುಡುಗಾಟದಿಂದ ಹೊಗೆಯೆದ್ದ ಮಾದರಿ, ದಾರಿಯಲ್ಲಿ ನಡೆದ ಸಂಗತಿಯೊಂದು )

ಹಳೆಯ ಗೆಳೆಯರಿಬ್ಬರೆಂದು
ಎಳೆಯ ದಿನದ ಸುದ್ದಿಗಳನು
ಅಳತೆಗೆಟ್ಟು ಗೆಳುಹಲೆಂದು ಅಲೆಯುತಿದ್ದರು.
ಅಳುಕು ಅದುರು ಸುತ್ತಲಿಲ್ಲ
'ಬೆಳಕು' ಒಂದು ಬಂದಿತಾಗ
'ಕುಲುಕು' ಆಗಿ ಗೆಳೆಯನೊಬ್ಬ ಮಾತನಾಡಿದ.

ಗೆಳೆಯ : ತಿಳಿನೀಲಿ ಪತ್ತಲವು
ಬಿಳಿಯಾದ ಕುಪ್ಪಸವು
ಹೊಳೆವ ಹೊನ್ನುಂಗುರವು ಕಿರುಬೆರಳಿಗೆ.
ಎಳೆಚಿಗುರು ಮುಡಿಯಲ್ಲಿ
ಮಲ್ಲಿಗೆಯ ಮೊಗ್ಗುಗಳ
ಮಾಲೆ ಧರಿಸಿರುವವಳು ಯಾರು ಗೆಳೆಯ ?

ಮತ್ತೊಬ್ಬ : ಹೊಂಗೆನ್ನೆಯೊಳು ಥಳಕು
ಕಂಗಳೊಳು ಕಿರಿ ಬೆಳಕು
ಮುಂಗುರುಳು ನೊಸಲಮೇಲೆಸೆಯುತಿರುವ
ಅಂಗವಿನ್ಯಾಸದಲಿ
ಚೆಂಗನ್ನೆ ಬರುತಿರುವ
ಅಂಗನೆಯು ದಾರೆಂಬೆ ? ಎನ್ನಿನಿಯಳು.

ಇಬ್ಬರ ಮೊಗದ ಮೇಲಿನ ಬೆಳಕು ಹಾರಿಹೋಗಿತ್ತು.

೨೩-೧೨-೪೧

# ಬೆಳೆವೆ ನೋಡು !

ನೆಲಕೆ ಬಂದ ಬೀಜವೊಂದು
ಹುಳುವು ಹತ್ತಿ ಬೆಳೆಯದಾತು
ಒಳಗೆ ಒಳಗೆ ಅಳುಕುತಳುತ ಕೊಳೆಯತೊಡಗಿತು.
ಮಳೆಯು ಭರನೆ ಬಂದಿತೊಮ್ಮೆ
ಹುಳುವು ಅದುರಿ ಬಿದ್ದು ಹೋತು;
ಹಳೆಯ ಜಾಡ್ಯಕೊಡವಿ ಬೀಜ ಬೆಳೆಯಲೆಸಗಿತು.

ಬೆಳೆಯುತಿದ್ದ ಬೀಜ ಕಂಡು
ಹುಳುವು ಹೆದರಿ ಗದರಿಕೊಂಡು
ಗಳನೆ ನುಂಗಲೆಂದು ತನ್ನ ಕೈಯ ಚಾಚಿತು.
ಬೆಳೆವ ಭರದಲಿದ್ದ ಬೀಜ
ಬೆಳೆದ ಶಕ್ತಿಯಿಂದಲೊದೆದು
'ಬೆಳೆವೆ ನೋಡು; ಗಳುಹಬೇಡ ತಿಳಿಯೊ' ಎಂದಿತು.

೨-೩-೪೨

# ಗೋಕಾಕ ತಡಸಿಲು

ತಾಯಿ ಘಟಪ್ರಭೆ! ನಿನ್ನ ನೋಡಲು ಎಂದು ಹಿಂದೊಮ್ಮೆ ಬಂದಿದ್ದೆ
ಮಡದಿ ಮಕ್ಕಳಕೂಡ. ಗೆಳೆಯನೂ ಇದ್ದ ಮಡದಿಯೊಡಗೂಡಿ.
ಅದೆಂತು ಉಲ್ಲಸದಿಂದ ಸುತ್ತುವರೆದೆವು ನಾವು ನಿನ್ನ ನಾಡಿನಲಿ!
ಏನು ನಿನ್ನಯ ಸೊಬಗು! ಅದು ಯಾವ ದುಡುಕೊ! ತೊರೆಯಾಗಿ
ನೊರೆಯಾಗಿ ಪೆರ್ಮುಡುವ ಧುಮುಕುವುದು.— ಹಿಂದಿನಾ
ತಾಣಗಳ ಹಿಂದೂಡಿ ನಲ್ಲನೊಡ ರಮಿಸಲಿಕೆ ಮೆಲ್ಲನೆ
ಬರುವವಳು ಸಾಗರಬಿದ್ದು ಸಾರುವೆಯ ಸಾಗರಕೆ?

ನಲ್ಲನೊಡನಾಟವನು ನೆನೆವಾಗ ಮುಂದಿರುವ ಆಳ-
ನರಿತೆಯಾ ನೀನು? ಅರಿಯದಲೆ ಧುಮುಕುವುದು ನಿನಗೆ ತರವೆ?
ನಲ್ಲನನು ಸೇರುವಾ ಹಿರಿಯಾಸೆ ಈ ರಭಸ ನಿನ್ನಲ್ಲಿ ತುಂಬಿಹುದೆ?

ನೋಡಲಿಕೆ ನಿಂತೆಮಗೆ ನವಿರೇರಿ ಬರುವಾಗ ನೆಗೆದೆದ್ದು
ಸಾಗಿರುವ ನಿನಗೆ ನವಿರಿಲ್ಲವೆ?

ಬರುವ ಬುರುಗದು ನಿನ್ನ ಸಂತಸವ ಸೂಚುವುದೆ?
ದುಡುಕಿನಲಿ ಕಾಲಿಟ್ಟು ಕಂದೆರೆದು ಕಂಡಾಗ ಮಡುವಿನಲಿ
ಮುಗಿಬಿದ್ದು ಗಾಬರಿಗೊಂಡ ಬಾಯಿ ಬುರುಗೊ?

ಏನಾದೊಡೇನು ತಾಯೆ, ಈ ನಿನ್ನ ದುಡುಕನ್ನು ನಿನ್ನ
ನೋಡಲು ಬಂದ ತರುಣರೆದೆ ತುಂಬು. ಮುಂಬರುವ
ಕುಗ್ಗು ತಗ್ಗುಗಳನ್ನು ತೆರೆಯೆತ್ತಿ ನೋಡನಿಲ್ಲದಿರಲಿ.
ದುಡುಕಿ ಮಾಡಿಸು ಕೆಲಸ. ಹಿಂದಿರಲಿ ಸರಳ ಸುಬುದ್ಧಿಯು
ಮಾತ್ರ. ಕೆಡಕಾಗದೆಂದಿಗೂ.

ಬರುವೆ ನಾನಿನ್ನು. ಈ ನಿನ್ನ ದುಡುಕು ನೆನವಿನಲಿರಲಿ
ಸಂತತವು. ಹರಸು ತಾಯೆ!

೨೦-೯-೪೨

# ಮಳೆಬರುವ ಮುನ್ನ

ಕಾಡಾನೆಗಳ ತೆರದಿ
ಮೋಡಗಳ ತಿಕ್ಕಾಟ
ಮೂಡಣದಿ ಕಾಣುತಿದೆ ನೋಡು ಬೇಗ.
ಆಡುತಿಹುವವು ಒಮ್ಮೆ
ಓಡುತಿಹುವವು ಮತ್ತೆ
ಸಿಡಿದು ಸರಿಯುವ ಸೊಬಗು ನೋಡು ನೀನು.

ಏನು ಸಪ್ಪುಳವಯ್ಯ !
ಆನೆಗಳ ಆರ್ಭಟವೊ !
ಕಣ್ಣು ಕಿಡಿಯುಹುದೆ ಆ ಸೆಳೆವ ಮಿಂಚು ?
ಅನುಮಾನವೇನಿನ್ನು
ಮನ ಸೆಳೆವುದಾ ಬೆಳಕು
ಘನವೆ ನಿಂಬೆಳಕೆನಗೆ ಬಗೆದೋರಲಿ.

ಆದೆಂತಹ ಅದ್ಭುತ ನೋಟ. ಮೂಡಣದಿಂದ ಸಾಗಿ ಬರುತಿದ್ದವು ಮೋಡಗಳು. ತೆರೆವಾಯ್ದು ಮೇಲ್ವಾಯ್ದು ಅಪ್ಪಳಿಸುತಬ್ಬರದಿ ಆಗಸವ ಮುಸುಕಲು ಸಾಗುತಿದ್ದವು. ಹಿಂಜಿದರಳೆಯು ತೆರದಿ ಹೂವಾಗಿ ಕೆಲಕಾಲ. ಕಾಡಾನೆಗಳ ಓಡಾಟದಂತೆ ಕೆಲಕಾಲ. ಮದ್ದಾನೆಗಳು ಗುದುಮುರಿಗೆ ಹಾಕುವ ತೆರದಿ ಬಹುಕಾಲ. ತಿಕ್ಕಾಟದಿಂದ ಆರ್ಭಟ - ಮಿಂಚು - ಎಲ್ಲಿಯೋ ಮಾಯವಾಗುತ್ತಿದ್ದಿತು. ಒಂದೆಡೆಗೆ ಕವಿದಿದ್ದ ಮೋಡಗಳೀಗ ಬಾನೆಲ್ಲ ಪಸರಿಸಿವೆ. ತಂಗಾಳಿ ಸೂಸುತಿದೆ. ಹನಿಯುದುರಲು ಅವಕಾಶವೆ ? ಭರದಿಂದ ಬಂದಿತು ಮಳೆಯು ; ಬಾಯ್ಬಿಡುವ ಈ ಇಳೆಗೆ ಜೀವ ಹನಿಸಿತು ಮಳೆಯು. ಜಗವೆಲ್ಲ ತಂಪಾಗಿ ನೆಲದುಸಿರು ಕಂಪಾಗಿ ಬೆಂದ ಜೀವಕೆ ನಸುವೆ ಹಾಯೆನಿಸಿತು.

೯-೧೦-೪೨

# ಚಂದಿರನು ಮೇಲೇರಿ*

ಚಂದಿರನು ಮೇಲೇರಿ ತಾರೆಗಳು ಹೊಳೆಯುತಿರೆ
ತಂಗಾಳಿ ಹಗುರಾಗಿ ಬೀಸುತಿಹುದು.
ಹೊನ್ನಿನಾಗರವನ್ನು ಬಗೆದು ತೆಗೆಯಲು ನಾವು
ಈ ಇರುಳು ದಾಟುವೆವು ಸಾಗರವನು.
ಜಗನರೆತು ಮುಪ್ಪಾಗಿ ಬಿದ್ದುಕೊಂಡಿಹುದೀಗ
ಅದಕಾಗಿ ಎದ್ದೇಳು, ಸಾಗು, ಹೊರಡು.
ಸ್ಪೇನಸಾಗರ ದಾಟಿ ಹುದುಗಿರುವ ಹೊಸ ಹೊನ್ನ
ಸಾಮ್ರಾಜ್ಯ ವಶಪಡಿಸಲೇಳಿ ನೀವು.

ಚೀನ ದೇಶದ ಕೀರ್ತಿ ಕಳಸ ಹೊಳಪಿನ ಆಚೆ
ಎಲ್ಲ ಮಾನವ ಕನಸ ಮೇರೆ ಮೀರಿ
ಹಗಲಿರುಳ ಕಲ್ಪನೆಯು ಸುಳಿಯಲಾರದು ಅಲ್ಲಿ
ಅಲ್ಲಿಹುದು ಬಯಸಿದ್ದ ಚಿನ್ನಗಣಿಯು.
ಆಗಸದ ಆಳದಲಿ ಮರೆ ಮುಸುಕನನು ಸರಿಸಿ
ಮೇಲೇಳ್ದ ಕುಂದಿಲ್ದ ತಾರೆಯಂತೆ
ಸ್ಪೇನಸಾಗರದಾಟಿ ಹುದುಗಿರುವ ಹೊಸ ಹೊನ್ನ
ಸಾಮ್ರಾಜ್ಯವದು ಸತತ ಹೊಳೆಯುತಿಹುದು.

* Moon is up—*Alfred Noyes*

೧೭-೪-೪೩

# ನಿವೇದನ

ಜೀವನದ ಜತೆಗಾತಿ
ಭಾವನೆಯ ಬಗೆ ರೂಪಿ
ಆವ ದಿನ ನೀ ಬರುವೆ ನನ್ನ ಜಗದಿ ?
ಕಾವು ಸರಿಯುತಲಿಹುದು
ಹೇವ ಮೀರುತಲಿಹುದು
ಆವ ದಿನ ನೀ ಬರುವೆ ನನ್ನ ಜಗದಿ ?

ಶ್ರಮಜೀವಿ ನಾ ಗೆಳತಿ
ಕ್ರಮವಿರದ ಬಾಳಹುದು
ಭ್ರಮೆ ಬೇಡ ನಿನಗೆಂದು ನುಡಿಯುತಿರುವೆ.
ರಮಿಸಿ ನೀ ಸೊಗವೀಯೆ
ಅಮಿತ ಸುಖ ಬರಬಹುದು
ಪ್ರೇಮಮಯವಾಗುವುದು ನಮ್ಮ ಬಾಳು.

ಬಡತನದ ಬಾಳಿನಲಿ
ಜಡತನವು ಬೆಳೆದಿಹುದು
ಮಡದಿ ಶೀಲವು ನನ್ನ ಬಾಳಗೋಲು.
ಕಡೆತನಕ ಹಿಡಿವಂಥ
ಪಡೆದ ಶೀಲವು ತಂದ
ಒಡತಿ ನೀ ಎನ್ನ ಹಿಡಿದಿರುವ ಶೀಲೆ.

೭-೯-೪೪

# ಒಳ ಕುದಿತ

ಹಣವು ಹತ್ತಿರವಿಲ್ಲ
ರಿಣವು ಬೆಳೆಯುತಲಿಹುದು
ಅಣಿಯಾಗಬೇಕೆಂದು ನವೆಯುತಿರುವೆ.
ಚಣಕೊಂದು ಬಗೆಯಾಗಿ
ನೆಣವು ಸವೆಯುತಲಿಹುದು
ಪಣತೊಟ್ಟು ಮೈಮುರಿದು ದುಡಿಯುತಿರುವೆ. ॥ ೧ ॥

ಮನದ ಆಸೆಗಳೆಲ್ಲ
ನನೆವೊಡೆದು ಕಮರುವುವು
ಹೀನತರಕಿಳಿದಿಹುದು ನನ್ನ ಬಾಳು.
ಮನೆಬಿಟ್ಟು – ಮಠಬಿಟ್ಟು
ಜನನಿಂದೆಗಳ ಸಹಿಸಿ
ಕನಲಿ ಬಳಲಿದೆ ನಾನು ಬಹಳ ಬರಿದೆ. ॥ ೨ ॥

ಕೆಳಕೆಳಗೆ ಇಳಿದಂತೆ
ಒಳಕುದಿತ ಹೆಚ್ಚುವುದು
ಗಳಿಗೆ ಯುಗವಾಗುವುದು ಬೇಸರಡಸಿ.
ತಿಳಿವು ದಾರಿಯ ತೋರಿ
ಬಳಿಸಾರಿ ನೈದಡವಿ
ಕೆಳೆಯಾಗಿ ಹಿಡಿಯುವುದು ಕುಸಿಯಗೊಡದೆ. ॥ ೩ ॥

ಹಿಂದೊಮ್ಮೆ ನೋಡಿದರೆ
ಅಂದಗೆಟ್ಟಿಹ ಬಾಳು
ಬೆಂದು ಬಳಲಿದ ಮನವು ಇದಿರಿಸುವುದು.
ಕಂದಿ ಕಮರಿದ ಆಸೆ
ಬಂದ ಬೇಗುದಿ ಬವಣೆ
ಹೊಂದಲಾರದ ವಿಷಯ ಮುಂಬರುವುದು. ॥ ೪ ॥

ಇಂದೇನು ನಡಸಿರುವೆ-
ನೆಂದು ಏಂಗಡಿಸಿದರೆ
ಒಂದೆಭಾವವು ಬಂದು ಅಣಕಿಸುವುದು;
ಮಂದಗತಿ ಕೆಲಸದಲಿ
ಬಂದಿಹುದು; ಬಿಡಲರಿದು;
ಎಂದು ನಿಜಗತಿಯನ್ನು ಪಡೆಯಬಹುದು ? ॥ ೫ ॥

ಹಿಂದಾದುದನು ನೆನಸಿ
ಮುಂದುವರೆಯಲುಬೇಕು
ಮಂದಗತಿ ಎಂದರಿದು ಕುಳಿತರೇನು ?
ಮುಂದಿರುವ ಗುರಿಯನ್ನು
ಒಂದಿನವು ಬಿಡದಂತೆ
ಹೊಂದಿ ಸಾಗಲು ಬೇಕು ಅರಿವು ಪಡೆದು. ॥ ೬ ॥

೨-೧೨-೪೪

# ಅಂತರಂಗದ ಕಾವು

ಆಗಸದ ಬಿತ್ತರದಿ ತಾರೆಗಳು ಚಮಕುತಿರೆ
    ಕಡಲಿನಲೆಗಳು ಅಂಚಿಗುರುಳುತಿಹುವು
ಸುಳಿಗಾಳಿ ಅಲೆಯಾಡಿ ಮೈಮುಟ್ಟುತಿರುವಾಗ
    ಮನದ ಕಾತರಭಾವ ಮೀರುತಿಹುದು.

ಬಾನ ಮೋಡಗಳೆಲ್ಲ ಬಯಲಾಗಿ ಹೋದರೂ
    ಮನದ ಮುಸುಕದು ತಾನೆ ಸರಿಯದಿಹುದು.
ಗಾಳಿಗೊಡ್ಡಿದ ಮೈಯು ತಂಪಾಗಿ ನಡುಗಿದರೂ
    ಅಂತರಂಗದ ಕಾವು ಸರಿಯದಿಹುದು.

# ಡಾಕ್ಟರನ ಇತಿಮಿತಿ*

ಡಾಕ್ಟರನಿದ್ದನು ಪ್ರಾಮಾಣಿಕನವ
ನಡೆಸಿದ ದೊಡ್ಡೂರಲಿ ಉದ್ಯೋಗ.
ದುಡಿಮೆಯು ಲೆಕ್ಕದ ಮಾತೆತ್ತಿದರೆ
ಹೊಮ್ಮುತಲಿದ್ದಿತು ಉದ್ವೇಗ.

ಈ ದುರವಸ್ಥೆಯು ತಪ್ಪಿಸಲವನು
ಹಳ್ಳಿಯು ಸೇರಲು ಬಯಸಿದನು.
ನೆಮ್ಮದಿಯಿಂದಲಿ ತನ್ನಯ ಕಾರ್ಯವ
ಸಾಗಿಸುವಾಸೆಯು ನಂಬಿದನು.

ಹಲವರ ಕೇಳಿ ಬಲು ಸುತ್ತಾಡಿ
ಕಳೆದನವನು ಕೆಲ ದಿನಗಳನು
ಎಲ್ಲಾ ತಾಣದಲೆದುರಾಳಿಗಳೆ!
ಅವರಲಿ ಒಬ್ಬನೆ ಗಳಿಸುವನು.

ಹುಡುಕಿದ ಕೊನೆಯಲಿ ಎಡೆಯೊಂದು
ಎದುರಾಳಿಲ್ಲದ ತಾಣವದು.
ಗುತ್ತಿಗೆಯಾಯಿತು ತನಗೆಂದು
ಉಬ್ಬಿದ ಮನವದು ಕಾಣುವುದು.

ಬಳಲುವ ಮಾನವನಿರಬಹುದೆಂದು
ಅತ್ತಿತ್ತಾಗಲೆ ಇಣಿಕಿದನು.
ನಾಕಿಪ್ಪತ್ತಿನ ಮುದುಕರ ಹುಮ್ಮಸ
ನೋಡುತ ಮನಬಿರಿ ತಿಣಿಕಿದನು.

* Doctor's Dilemma: *Narendranath Bhatta*

ಹಿರಿಯನನೊಬ್ಬನ ಕೇಳಿದನೊಮ್ಮೆ
"ಯಾರಾದರೂ ನಿಜ ಬಳಲುವರೆ ?"
"ಬೇನೆಯ ಹೆಸರು ಕೇಳದು ಇಲ್ಲಿ.
ಯಾರಾದರೂ ಇದ ನಂಬುವರೆ ?"

"ಹಿಂದಕೆಯೊಮ್ಮೆಯು ಯಾರೂ ಇಲ್ಲವೆ
ಈ ಹಾಳೂರಲಿ ಸತ್ತವರು ?"
ಉತ್ತರ ಬಂತು : ಬಲುದಿನ ಹಿಂದೆ
ಸತ್ತವರೊಬ್ಬರು ಡಾಕ್ಟರರು.

ಕಾಲಿನ ನೆಲವು ಕುಸಿಯಿತು ಆಗ
ಆಸೆಗಳೆಲ್ಲವು ಹಾರಿದುವು.
ಕಾರಣ ಕೇಳಿದ ಮಾತಿಗೆ ಉತ್ತರ :
"ಕೊಳಿಲ್ಲದೆ ದಿನ ಜಾರಿದುವು"

೧೭-೮-೪೫

## ಏನೆಂದು ಕರೆಯಬೇಕು ?

ನಮ್ಮ ದೇಶದೊಳಿಹರು ಹಲವಾರು ಜನರು
ತಾವು ತಿಳಿದವರೆಂದು ತಿಳಿದುಕೊಂಡವರು
ಆರೋಗ್ಯವನು ವ್ಯಯಿಸಿ ಭಾಗ್ಯವನು ಪಡೆವಾಗ
ಸಾವು ಬಾಗಿಲ ಬಳಿಯೆ ಬಂದು ನಿಂತಿಹುದು.

ಆರೋಗ್ಯ ಬಾಳೆಲ್ಲ ಹಾಳಾದ ನಂತರವೆ
ಹಲವಾರು ಬಗೆಯಿಂದ ಯತನ ನಡೆಸಿ
ಪಡೆದ ಭಾಗ್ಯವನೆಲ್ಲ ಆರೋಗ್ಯ ಪಡೆಯಲ್ಕೆ
ವ್ಯಯಿಸುವವಗೇನೆಂದು ಕರೆಯಬೇಕು ?

# ಬಾಪೂ !

ಹಗಲಿರುಳು ಹದಿನೆಂಟು ಗಂಟೆಗಳ ಕಾಲ ವಿರಮಿಸದೆ
ನೀ ಗೈದೆ ಭಾರತದ ಸೇವೆ. ದಾಸ್ಯಬಲೆಯಲಿ
ಸಿಕ್ಕ ಜನವನೆಬ್ಬಿಸಿದೆ. ನೀತಿ ನಿರ್ಮಲ ನಿಂದು !
ಸತ್ಯವೆ ಆಧಾರ; ಅಹಿಂಸೆಯೆ ಆಯುಧವು. ಧರ್ಮ–
ವಾಚರಿಸುತ್ತ ರಾಜಕಾರಣವನ್ನು ಆಧ್ಯಾತ್ಮ
ಬಲದಿಂದ ತೇಜಿಸಿದೆ ನೀನು. ಯಾವುದಕ್ಕೂ ಮುಚ್ಚು
ಮರೆಯಿಲ್ಲ. ಮುನ್ನೆಚ್ಚರದ ಮಾತಿನಿಂ ಎದುರಾಳಿ-
ಯನ್ನೆಚ್ಚರಿಸಿ ಸಡ್ಡು ಹೊಡೆಯುವ ರೀತಿ ನಿನ್ನದು !
ನಿನ್ನದೇ ರೀತಿಯದು. ಇಂತಹರು ಇನ್ನೊಬ್ಬರಿಲ್ಲ.
ಎದುರಾಳಿಗೌತಣವ ಕೊಡುವವನು ಎಚ್ಚರವ ಕೊಡು
ವವನು ಎದೆಗಾರನಲ್ಲವೆ ? ಎಂಥ ಎದೆ ನಿನ್ನದು !
ಬಳಲುವರ ಕಂಡು ಬಳಲಿ ಬಾಗಿದ ಎದೆಯು ! ಆರ್ತ
ರಿಗೆ ಅಮೃತರಸ ಹರಿಯಿಸಿದ ಹಿರಿದಾದ ಎದೆಯು.
ಕೊನೆಗಾಲ ಬಂತೆಂದು ಜಗ್ಗದಿಹ ಕುಗ್ಗದಿಹ
ಕುಸಿಯದಿಹ ಎದೆಯು ! ಹಿಂಸೆಭಾರದಿ ಬಳಲಿ ಬೆದರಿ
ತೊಳಲಿ ತಗ್ಗಿದ ಜಗಕೆ ಶಾಂತಿ ಸಂದೇಶವನು
ಸಾರಿ ಪೇಳಿದ ಎದೆಯು ! ಜಾಗತಿಕ ಜೀವನದಿ
ಎತ್ತರದ ತಾಣವನು ಭಾರತಕೆ ದೊರಕಿಸಿದ ಭಾಗ್ಯ-
ವಂತನು ನೀನು. ಬಂಧನವು ಬಯಲಾಗಿ ಹೊಸಬೆಳಕು
ಬರುತಿರಲು ಸಂಧಿ ಸಮಯದಿ ನಿನ್ನ ಅಸರವು
ಹೋಯಿತೆ ? ನಿನ್ನ ಕಜ್ಜವು ಅಂದೆ ಸಂದಿತಂತೆ !
ಇಳಿದು ಬಂದಿಹ ಭಾರವನು ನಿನ್ನ ಹೆಸರಿಗೆ ತಕ್ಕ
ದೇಶಗೌರವ ತಕ್ಕ ವಹಿಸುವೆವು. ಇದು ನಮ್ಮ ವಚನ.

೨೮-೯-೪೮

# ಜವಾಹರಲಾಲ ನೆಹರು

ಮೂಡು ಪಡುವಣ ವಿದ್ಯೆ ಸಂಸ್ಕೃತಿಯು ಸಂಮಿಶ್ರ
ಸೆಲೆಯುಬ್ಬಿ ಹರಿಯುತಿದೆ ನಿನ್ನ ಬಾಳಿನಲಿ. ಪಡು-
ವಣದ ಪದ್ಧತಿಯು ಮೈಗೂಡಿಕೊಂಡಿಹುದು. ಮೂ-
ಡಣದ ಹಿರಿಮೆಹಿಮೆ ಮೆರೆಯುತಿಹುದು. ಏನು ವೈಚಿತ್ರ್ಯವೈ
ನಿನ್ನ ಬಾಳು ! ಆವೇಗದಾವೇಶದವತಾರವಾಗಿರುವೆ
ಭಾರತದ ಬಾಪುವಿನ ಮೆಚ್ಚಿನೆಣುಗ ! ಅರುವತ್ತು
ವರುಷಗಳ ಹಿರಿಯ ನೀನಾದರೂ ಹರೆಯ
ನಾಚಿಸುವಂಥ ದುಡುಕು ನಿನ್ನದೆಲೆ ! ರಾಜಾಧಿರಾಜರನು
ಮೀರಿಸುವ ವೈಭವದ ಮನೆತನದಿ ಜನಿಸಿದರೂ
ಬಡತನದ ಬಾಳಿಂಗೆ ಸಿದ್ಧನಾದೆ—
ಸೆರೆಮನೆಯ ಬಂಧನವು ಸುತ್ತಲೂ ಕವಿದಾಗ
ಬಾಳಿನಾ ಬಿಡುವಿಹುದು ನಿನ್ನ ಮನಕೆ. ಬಂಧನವು
ಬಯಲಾಗಿ ಬಿಡುಗಡೆಯು ಬಂದಿರಲು ಬಿಡುಗಡೆಯ
ನೆಮ್ಮದಿಯು ಕಾಣದಿಹುದು. ಆಕಾರದಲಿ ನೀನು
ಕಿರಿಯಾಳು ಪುಡಿಯಾಳು. ಕಾರ್ಯದಲಿ ಹಿರಿಯಾಳು
ಹುರಿಯಾಳು ಎಂದಿಗೂ. ಹೊರನೋಟಕೀ ಬಗೆಯ
ವೈಚಿತ್ರ್ಯವಹುದು. ಒಳನೋಟದಲಿ ಯಾವ ಭೇದವುಂಟು ?
ಮೂಡುಪಡುವಣ ಭೇದ ಹೊರನೋಟದೊಳಗಿದ್ದು
ಒಂದೆ ತಾಣದಲಿರುವ ಮೊಗಗಳೆರಡು. ಮೊಗವೆನಿತು
ಕಂಡರೂ ಬಗೆಯೆನಿತು ತೋರಿದರೂ ಹುದುಗಿರುವ
ಒಳ ಭಾವ ಜೀವ ಒಂದು. ಅದುವೆ ಹಿರಿಭಾರತದ
ಯೋಗಭಾವ. ಬಾಗುವೆನು ನಾ ನಿನಗೆ ಭಾವಯೋಗಿ.

೬-೮-೪೯

# ಏಳು ಮಗು

ಇದು ನೋಡು! ಇಲ್ಲಿ ನಿಂತಿಹೆನು ನಾನು
ಹೊಸ ಬಾಳ ತೋರುತಿಹ ಉದಯಭಾನು

ಏನು ಬೇಕೆಲೆ ನಿನಗೆ ಬಂದು ಬೇಡು
ಬೇಡಿದ್ದ ಕೊಡುವೆ; ನೀ ಸುಖವಾಗಿ ಆಡು

ಹಿಡಿ ಮಗುವೆ ನೀನು ಹಿಡಿ ತುಂಬ ಹೊನ್ನು
ನಡೆ ಮುಂದೆ ಮುಂದೆ ತಡೆಯದಲೆ ಇನ್ನು

ಬಾಗಿಲಿಕ್ಕಿದೆಯೆಂದು ಮರುಗಬೇಡ.
ಬಾಗಿಲಿಗೆ ಕೈಯಿಹುದು ಹೆದರಬೇಡ.

ಎಲ್ಲವೂ ಇಹುದಿಲ್ಲಿ; ಮನವು ಬೇಕು
ಮನಸಿನಿಂದಲೆ ಮಾರ್ಗ ಪಡೆಯಬೇಕು.

ಕಾರ್ಯ ಮಾಡುವ ಮನಸು ಪಡೆಯಲೇಳು
ಏಳು, ಎದ್ದೇಳು ಮಗು, ಮಾತು ಕೇಳು.

೧೫-೯-೪೯

# ಭಾರತದ ಸರದಾರ

ಆಳರಸರಧಿರಾಯತನವಂದು ಮುಗಿದೆಮ್ಮ
ಕೈಗೆ ಬಂದಿತು ನಾಡಿನಾಡಳಿತ ಸೂತ್ರ. ದಾಯಾದಿ
ಭಾವ ತಾ ಮೇಲ್ವಾಯ್ದು ಮುಗಿಬಿದ್ದು ಮಾಯ-
ಲಾರದ ಗಾಯ ಮಾಡಿತೆಮಗೆ. ಗಾಯಗೊಂಡಿದೆ
ಎಂದು ಹುಲಿಯ ಕೆಣಕುವ ದಾರಿ ತುಳಿದರ್ಕೆ
ಕೆಲರು. ಬಸಿವ ನೆತ್ತರಗಾಯವಿದ್ದರೇನಾಯ್ತು
ಬಿಸಿರಕ್ತದೆದೆಗಾರರಿರುವ ತನಕ ! ಬಂದುದಕೆ
ಇದಿರಾಗಿ ಧೈರ್ಯದಿಂದಾಡಳಿತ ಸಾಗಿಸಿದೆ ನೀನು.
ಕೃತಿಶಕ್ತಿ ನಿನ್ನದೆಲೆ ! ವಜ್ರಾಯುಧದ ಶತಕ್ರತು-
ವಿಗೆ ಸಮನಾದ ಶಕ್ತಿಯದು. ಮರುಳತನದಿಂದೆದ್ದು
ಬಂಡುಸಾರಿದ ಭೂಪತಿ ಕುಲಕೆ ಎರಗಿ ಬಂದಿತು
ನಿನ್ನ ವಜ್ರಮುಷ್ಟಿ. ವಲ್ಲಭಗೆ ಇದಿರಾಗಿ ಸುಖ
ಬಾಳಿದವರುಂಟೆ ? ಜಗವೆಲ್ಲ ಬೆರಗಾಗಿ ನೋಡ
ನೋಡುತ್ತಿರಲು ಭಾರತದ ಬಣ್ಣವನು ಬದಲಿಸಿದೆ
ನೀನು. ಎಂಟೆದೆಯ ಬಂಟ ನೀನಹುದು.
ಬಾಪುವಿನ ಸರದಾರ ! ಭಾರತದ ಸರದಾರ !

೨೫-೯-೪೯

# ಭಾವಯೋಗಿ

ಅನುಭವದ ಪುಟದಿಂದ ಪುಟನೆಗೆದು ಹೊರಬಂದು
ಮಿಂಚಾಗಿ ಬೆಳಕಾಗಿ ಮೆರೆಯುತಿರುವೆ.
ಸಾಹಿತ್ಯ ಸಮ್ರಾಟರಾಗಿರುವ ಕವಿಕುಲದ
ದೀಪಕರ ಮಾಲೆಯೊಳು ಮೆರೆಯುತಿರುವೆ.

ಅರುವತ್ತು ವರುಷಗಳು ತುಂಬಿಹುವು. ಜೀವನದಿ
ಶಾಂತಿ ನೆಲಸುವ ಕಾಲ ಬಂದಿರುವುದು.
ಭಾರತದ ಬನ್ನಗಳು ಬವಣೆಗಳು ಮುಗಿಬಿದ್ದು
ಶಾಂತಿ-ವಿಶ್ರಾಂತಿಗಳ ತಡೆದಿರುವುವು.

ಕಾರ್ಯಮಾಡುತ್ತಲೆ ಬಾಳ ಸವೆಸಿಹ ಜೀವ
ಶಾಂತಿ ಎಂದಾದರೂ ಬಯಸಬಹುದೆ?
ಕಾರ್ಯಮಾಡುವುದೊಂದೆ ಜೀವಬಯಸಿದ ಗುರಿಯು
ದುಡಿಮೆಗುಂಟೆ ಇನ್ನು ಫಲವು ಬೇರೆ?

ಬಲವಾದ ಭಾವನೊಡನಾಟ ನಿನ್ನಯ ಗುರುತು,
ಬಲು ಭಯಾನಕ ಬಾಳ ರೀತಿಯೆ ಗೊತ್ತು;
ಭಯವು ತಾ ಭಯಗೊಂಡು ಹೌಹಾರಿ ಹೋಗಿಹುದು;
ಬಾಳು ಸಾಗುತಲಿಹುದು ನೆಲೆಯನರಿತು.

ಭಾರತದ ಬಾಪುವಿನ ಬಲಗೈಯು ನೀನಾಗಿ
ಅಂತರಂಗದ ಶಕ್ತಿ ಪಡೆದೆ ನೀನು.
ಬಹಿರಂಗರೂಪಕ್ಕೆ ಭೋಗಿ ನೀ ಕಂಡರೂ
ಆತ್ಮತೇಜದ ಭಾವಯೋಗಿ ನೀನು.

೫-೧೦-೪೯

# ಗಹನಿ-ಕವಿ

ನೀರ್‌ಕಣ್ಣು ; ನಿಡುನೋಟ ; ಬಗೆ ಅರಳು ಮೊಗಮಾಟ
ಕೈ ಮಾಡಿ ತಿಳಿಸುತಿಹ ಸರಲಭಾವ.
ಮೂಗನೇರಕೆ ಬಂದ ಭಾವ ಹಿಡಿಯುವ ಹವಣು
ಚಿವ್‌ಗಣ್ಣು ತೋರುತಿದೆ ಮನದ ಕಾವ.

ಮಾತು ಮಾತಿಗೆ ಬಂದ ಮಥನ ದರುಶನವನ್ನು
ಬಿಡಿಬಿಡಿಸಿ ಸಾರುವುದು ಹಾವಭಾವ.
ಅಂತರಂಗದಿ ನಡೆದ ಅನವರತ ತಿಕ್ಕಾಟ
ಹತ್ತಿಕ್ಕಿ ಬಿಡುವ ಆನಂದಭಾವ.

ಉಕ್ಕುತಿಹ ಭಾವಗಳ ಆವೇಗ ತಡೆಯಲ್ಕೆ
ಈ ದೇಹಶಕ್ತಿ ತುಸು, ಸಾಲದೇನೊ !
ಭಾವದಾವೇಗವು ಕವುಲೊಡೆದು ಬಂದಾಗ
ದೇಹ ನಡುಗಿಸಿ ಹೊರಗೆ ಬರುವುದೇನೊ !

ಬಡ ದೇಹವಿದು ಎಂಬ ಭಾಸ ತಾ ಕೊಡುವಾಗ
ನೋವು ನಲಿವಿನ ಸಿರಿಯು ಕಾಣುತಿಹುದು.
ಅನುಭವವ ಹುದುಗಿಸಿಹೆ ಅನುಭಾವ ಪಡೆದಿರುವ
ಭಾವಗರ್ಭಿತ ಬಾಳಗಹನಿಯುಹುದು.

ಕವಿಯು ಕಲ್ಪನೆಯಲ್ಲಿ ಮಿಗಿಲೆನಿಸಿಕೊಂಡಿರುವೆ ;
ಜನಮನಂಗಳ ಸೆಳೆದು ಹಿಡಿಯುತಿರುವೆ.
ಸರಸ ರಸ ಶೃಂಗಾರರಸವೆ ನಿನಗಾಧಾರ
ತಾಯ ಮಗ ದತ್ತ ನೀ ಬೆಳೆಯುತಿರುವೆ.

೫-೧೧-೪೯

# ಬದುಕು-ಮಾಡು

ಇದು ನನ್ನದಿದು ನನ್ನದೆಂದೆಂಬ ಭಾವದಿಂ
ಹೋರಾಟಕಿಳಿಯೆ ನೆಲ ಹೋಳಾಯಿತು.
ನಾ ಬೇರೆ ನೀ ಬೇರೆ ಎಂಬ ಮದ ಬೆಳೆದಾಗ
ಭೂತಾಯ ಬಂಧನವು ಬಿಗಿಯಾಯಿತು.

ಅಲೆದಲೆದು ಸಾಕಾಗಿ ನೆಲವೆ ನೀ ಗತಿಯೆಂದು
ನೆಲಸಿದ್ದ ಪರಿಯು ನೀ ಮರೆತೆಯೇನು?
ನೆಲವೆ ನಿನಗಾಧಾರ ಬಾಳ ಬೆಳಕಿನ ಸಿರಿಯು
ಒದಗಿಸಿಹ ಋಣವ ನೀ ತೊರೆದೆಯೇನು?

ಮನಸು ಮಾಡಿದೆ ಅಂದು ನೆಲವ ಸಲುಹಿದೆ ಒಳಿತು
ಮರಳಿ ನೆಲ ನಿನ್ನನ್ನು ರಕ್ಷಿಸಿತ್ತು.
ಹಣಕೆ ನೀ ಬಾಯ್ಬಿಟ್ಟು ನೆಲದ ಕೆಳೆಯನು ಮರೆತು
ನಗರ ಮೊಗ ಕಂಡಾಗ ಬಂತು ಕುತ್ತು.

ನಿನ್ನ ಭಾರವ ಹೊತ್ತು ನಿನ್ನನೇ ಪೊರೆಯುತಿಹ
ನೆಲದಲ್ಲಿ ಕಣ್ಣಿಟ್ಟು ಬದುಕು ಮಾಡು!
ಮನಸು ಒಂದೆಡೆಯಿಟ್ಟು ಬೇರೆಡೆಗೆ ಕನಲಿದರೆ
ಬದುಕು ಬಾಳೆಲ್ಲವೂ ಹಾಳು ನೋಡು.

ನೆಲನಂಬು; ಹಣದಾಸೆ ತೊರೆದು ನೆಲಯೋಗಿ ನೀ
ಹುಲುಸಾದ ಬೆಳೆಗಾಗಿ ಯಾತನೆ ಮಾಡು.
ಬೆಳೆ ಬರಲು ಜಗವೆಲ್ಲ ಬೆಳಗುವುದು; ನಿನ್ನನ್ನು
ಹರಸುತಿಹ ಹೊಸಬಾಳ ಬದುಕು ನೋಡು.

೧೩-೧೧-೪೯

# ನಗು ಮಗು !

ನಗು ಮಗುವೆ ನಗು ನೀನು ನಗುತಲಿರು ಸತತ
ನಗೆ ಬಾಳನೆದುರಿಸುವ ಹವಣು ಹಿಡಿತ.

ನಗು ಮಿಂಚು ತರುವುದದು ಕಣ್ಣು ತುಟಿಗಳಲಿ
ಆ ಮಿಂಚಿನಿಂ ಬಾಳು ಬೆಳಗುತ್ತಲಿರಲಿ.

ಆ ಕಣ್ಣ ಹೊಳಪಿನೊಳು ಹುದುಗಿರುವುದೇನು ?
ನಾಳಿನೊಡಲಿನ ಬಾಳ ಸಿರಿಯಲ್ಲವೇನು ?

ಕಹಿಸಿಹಿಯ ಕಲಸು ಈ ಬಾಳು, ತಿಳಿ ಮಗುವೆ
ಕಹಿ ಕೂಡ ಸೀಯಹುದು ತಿಳಿನಗೆಯು ಕೊನರೆ

ನಗುತಲಿರು, ನಲಿದಾಡು, ಜೀವನವು ಆಟ
ಪಡೆ ಬಾಳಸಿರಿ ತೋರ್‍ವ ನಗುಮೊಗದ ಮಾಟ.

೧೦-೧-೫೦

# ವಾಸು-ಲೀಲಾ

ವಾಸು :
ಹೂಗಳಲ್ಲಿಯ ಹೂವು ನೀನಾಗಿ ಬಂದಿರುವೆ
ಲೀಲೆ, ನೀಯೆನ್ನ ಮನೆತೋಟಕಿಂದು.
ಎನ್ನ ಮನದಾಸೆಗಳ ಗೋಪುರವ ಏರಲಿಕೆ
ನೆರವಾಗು ಇನಿಗಂಪ ಮಧುವ ತಂದು.

ಲೀಲೆ :
ಹೂಂ, ಎಂದು ಹೊಳಿದರೆ ಸಾಕಲ್ಲವೆ, ದೇವ
ನಿನ್ನಾಸೆ ಗೋಪುರವೆ ನನ್ನದಿಹುದು.
ಮುದದಿಂದ ಕೆಳೆಯಾಗಿ ಸಂತತವು ಬೆಳೆಯುತಿರು
ದೇವ ದೇವನ ಕರುಣೆ ನಿನಗಿರುವುದು.

ವಾಸು :
ದೇವದೇವನ ಕರುಣೆ, ಲೀಲೆ, ಇರುತಿಹುದೆಂದು
ಬಂದಿರುವೆ ಎನ್ನ ಜತೆಗಾತಿಯಾಗಿ.
ಜತೆಯಿಂದ ಜೀವನಕೆ ಹೊಸಶಕ್ತಿ ಬರುತಿಹುದು
ಜೀವನವ ಚಿಗುರಿಸಲೆ ಸರತಿಯಾಗಿ.

ನಿನ್ನ ಜತೆಯಿಂದೆನ್ನ ಬಾಳಿಂಗೆ ಹೊಸಚಿಗುರು
ಜೀವಸತ್ವದ ಕೆಳೆಯ ಹೊಗರು ತೋರು.
ಜೀವ ಜೀವಕೆ ಸೇರೆ ಹೊಸಜೀವ ಕೊನರುವುದು
ಅದು ಬೆಳೆವ ಬಾಳಿಂಗೆ ತಾಯಿಬೇರು.

ವಾಸು :
ಜತೆಯಾಗಿ ಬಂದವಳು ತಾಯಾಗಿ ನೀ ಸಲುಹು
ತಾಯಿ ಲೋಕದ ಬಾಳ ಹೊಣೆಯು ತವರು.

ಲೀಲೆ :
ಹೊಣೆತವರು ನಾನಹುದು; ಬೆಳೆಯಿಸುವ ಎದೆ ಬರಲಿ
ಇರಲೆನಗೆ ನಿನ್ನ ಬಲತೋಳ ನವಿರು

೧೭-೧೨-೪೯

# ಭಾವಯುವತಿ

ಯಾವ ಜನುಮದ ಕೆಳೆಯು ನಿನ್ನನ್ನು ಬಯಸುತಿದೆ
ನಾನರಿಯೆ; ಹೇಳುವೆಯ ಮುಗುದೆ ನೀನು?
ನಗುಮೊಗದ ಮಾಟದಿಂ ಒಂದೆ ನೋಟಕೆ ಎನ್ನ
ಅಂತರಂಗವ ಹೊಕ್ಕು ಹಿಡಿದೆ ನೀನು.

ಕಣ್ಣು ಕಂಡಿತು ಮೊಗವ; ಮೊಗವು ಸೆಳೆದಿತು ಕಣ್ಣು
ನೋಟ ಒಂದಾಗಿಸಿತು ಎರಡು ಜೀವ.
ನಗೆಮುಗುಳು ಹೆಚ್ಚಿಸಿತು ಮೊಗದ ಚೆಲುವನು ಆಗ
ಬಿಂಬಾಗಿ ತೋರಿಸಿತು ಮನದ ಭಾವ.

ಬಿಂಬಕ್ಕೆ ಪ್ರತಿಬಿಂಬ ಎದುರುಬದುರಾಗಿರಲು
ಅಧರಬಿಂಬವು ನಸುವೆ ಅದುರಿತಾಗ.
ಅದು ನಿನ್ನ ಒಳಮನವ ಅದುರಿ ತೋರಿದ ಬಗೆಯು
ಅರಿತಿಹೆಯ? ಎಲೆ ಚದುರೆ, ಹೇಳು ಬೇಗ.

ಚಂಚಲಾಕ್ಷಿಯರೆಂದು ಯುವತಿಯರ ಬಣ್ಣನೆಯು
ಸುಳ್ಳು ಸಾರಿತು ನಿನ್ನ ಅಚಲ ದೃಷ್ಟಿ.
ನೆಟ್ಟ ನೋಟದಿ ನನ್ನ ನೋಡುವಾಸೆಯು ಬರಲು
ಏನಿತ್ತು ನನ್ನಲ್ಲಿ ಭವ್ಯ ಸೃಷ್ಟಿ?

ಏನು ಕಂಡೆನೊ ನಾನು! ಎಂತು ತಿಳಿದೆನೊ ನಾನು!
ಹೇಳಿದರು ತಿಳಿಯದದು ಭಾವಯುವತಿ
ನಿನ್ನ ನಗುಮೊಗ ಮಾಟ ಕಣ್‌ಮಿಂಚು ಸುಳಿತುಟಿಯು
ಸೆರೆಹಿಡಿದು ಸಾರುವುದು: ನನ್ನ ಗೆಳತಿ.

೧-೧೦-೫೦

# ಹೊಸ ದಿನ

( ೨೬–೧–೫೦ )

ಏರುತ ಬರುತಿದೆ
ಮೂಡಣ ರಂಗದಿ
ಹೊಸ ಬಣ್ಣದ ರವಿ ಹೊಳೆಯುತಲಿ
ಭಾರತ ಭಾಗ್ಯವ
ಜಗದಲಿ ಮೆರೆಸುತ
ಹೊಸ ಬೆಳಕಿನ ಮುದ ಬೀರುತಲಿ ॥ ೧ ॥

ಶತಕಗಳಾಚೆಯು
ವೈಭವ ಮರಳಿಸಿ
ಏರುತ ಸಾರುತ ಬರುತಿಹುದು
ಭಾರತ ಬಣ್ಣವ
ಬುವಿಯಲಿ ಬೀರುತ
ಹೊಸ ಸಂದೇಶವ ಕೊಡುತಿಹುದು ॥ ೨ ॥

ಸುಖಶಾಂತಿಗಳಿಂ
ಬಾಳಿರಿ ಜನಗಳೆ !
ಬಾಳಲು ಬಂದಿರಿ ಭೂಮಿಯಲಿ
ಹೋರಾಟವ ತಡೆ
ಮಾನವ ನಿಲ್ಲಿಸು
ಹೊಸ ದಿನದುದಯದ ಸಮಯದಲಿ ॥ ೩ ॥

೨೬-೧-೫೦

# ಚಿತ್ರ-ಫಲಕ*

ಹೆಂಡ ಮಾರುವ ಹಿರಿಯ, ನಿನ್ನ ಚಿತ್ರವ ಬರೆದು
ತೂಗಿಸುವೆ ಬಾಗಿಲದ ತಲೆಯ ಮೇಲೆ;
ಹಿಂದೆಯೆಂದೂ ನೀನು ಇಂಥ ಬಣ್ಣದ ಫಲಕ
ತೂಗಿಸಿದ ಕುರುಹಿಲ್ಲ ಅಲ್ಲಿ ಮೇಲೆ;
ವಿಶ್ವಕರ್ಮನ ಕೈಯ ಕೌಶಲದಿ ಬರೆಯುವೆನು
ಇದು ನೋಡು ವಾಸ್ತವದ ಬಿಂಬವಾಲೆ.

ಇದು ನೋಡು ಈ ಚಿತ್ರ, ಹೆಂಡ ಮಾರುವ ಹಿರಿಯ
ತರುಣ ಹುಡುಗನಿಗಾಗಿ ಕಾಯುತಿರುವೆ;
ಹರೆಯ ಹೊಸತಿಲ ದಾಟಿ ಬಂದಿರದ ಆ ತರಳ
ತಾಯ-ಸಂತಸ ಹೆಮ್ಮೆ ಮೂರ್ತಿ ಎನುವೆ;
ಅವನಾಗಿ ನೋಡನೀಕಡೆ; ನಕ್ಕು ನೀನವಗೆ
ಕೆಳೆತೋರಿ ಮಾತಿಂಗೆ ಸೆಳೆಯುತಿರುವೆ.

ಹೆಂಡ ಮಾರುವ ಹಿರಿಯ, ನೀ ನಿಂತ ಬಗೆಯನ್ನು
ಬಣ್ಣಿಸುವೆ ಕಣ್ಣಿಟ್ಟು ನೋಡು ನೀನು.
ನೊರೆತುಂಬಿ ಬಂದಿರುವ ಮದ್ಯಪಾತ್ರೆಯ ಹಿಡಿದು
ಕೈಚಾಚಿ ಸೆರೆಯಿಸುವ ಬಗೆಯಿದೇನು?
ಕುಡಿವುದಕೆ ಮನಸಿಲ್ಲ; ನೀನವನ ಬಿಡಲೊಲ್ಲೆ
ಮೀರಲರಿಯದೆ ಕುಡಿದ; ಉಳಿಯಿತೇನು?

ವರುಷ ಸಂದಿಹುದೀಗ; ಈ ಚಿತ್ರವನು ನೋಡು
ಕುಡುಕನಲಿ ಕಾಣುವೆಯ ತರಳನನ್ನು?
ಹರೆಯ ಹುಮ್ಮಸದಿಂದ ಹುರಿಯಾಗಿ ಮಿಂಚಿದ್ದ
ಹುಡುಗನನು ಕಾಣುವುದು ಎಲ್ಲಿ ಇನ್ನು?

* The Signboard—*Miss Ella Wheeler Wilcox*

ಮಾದಕದ ಮಬ್ಬಿನಲಿ ಮೈಯ ಪರಿವೆಯು ಹಾರಿ
ಮಣ್ಣಿನಲಿ ಬೀಳುವುದೆ ಸರತಿ ಇನ್ನು.

ಕರುಳು ಕಿವುಚುವುದಕಟ, ತಾಯ ಪರಿಯನು ಕಂಡು
ಬಯಸಿದ್ದೆಳೇನನ್ನು ; ಆಯಿತೇನು ?
ಮಗನ ಏಳಿಗೆಗಾಗಿ ಹಂಬಲಿಸಿ ಹಾರೈಸಿ
ಹೆರಣವನು ಮೀಸಲಿಸಿ ಪಡೆದಳೇನು ?
ಕೈಮೀರಿ ಹೋಗಿಹುದು ; ಎದೆ ಬರಿದು ತೋರುವುದು
ಒಳಮನದ ಭಾವದಲಿ ಮೂಡಿತೇನು ?

ನಿನ್ನಮನೆಯಂಗಣದಿ ನೀನಾಗಿ ಬೆಳೆಸಿರುವೆ
ಸಾವು ನೋವುಗಳಿರುವ ಹುಲುಸು ಬೆಳೆಯು.
ಯಾವ ಮಾನವ ಕೈಯು ಈ ಚಿತ್ರ ಬರೆದೀತು
ನಾನಿದನು ಬರೆದಂತೆ, ಹುಳಿಯ ಹಿರಿಯು !
ಹಾದುಹೋಗುವ ಜನವು ನಿಂತು ಫಲಕವ ನೋಡಿ
ಗಾಬರಿಸಿ ದೂರುವುದು ನಿನ್ನ ಕೆಳೆಯು.

೨-೩-೫೦

## ಚಿತ್‌ಜ್ಯೋತಿ

ಎಲ್ಲೆಲ್ಲು ಹಬ್ಬುತಿಹೆ ಭಯಜನಿತ ಕಳ್ತಲೆಯು
ಘುತ್ತೆಂದು ಆವರಿಸಿ ಕನಲಿಸುವುದು.
ಬಾಳು ಬೆಳಕನು ಬಯಸಿ ಜೀವಸುಖ ಹಂಬಲಿಸಿ
ಚಿತ್‌ಜ್ಯೋತಿ ನಿನ್ನನ್ನು ನೆನಪಿಸುವುದು.

ಹತ್ತು ಸಾವಿರ ಕೈಯ ಗುಂಪುಗಳು ಕಂಡರೂ
ಶಾಂತಿದಾನದ ಕೈಯು ಕಾಣದಿಹುದು.
ಕುಲುಕಿಸುವ ಕೈಯಿಲ್ಲ; ಕೊಲ್ಲುವಾ ಕೈಗಳವು
ನಿನ್ನ ನೆರವಿನ ಕೈಯು ಬೇಕು ಇಂದು.

‘ ಅದು ಬೇಕು, ಇದು ಬೇಕು, ಎಲ್ಲವೂ ಬೇಕೆನಗೆ ’
ಎಂದು ಬೇಡುವ ಬಾಯಿ-ಕೈಯು ಇಲ್ಲಿ.
‘ ಕೈ ನೀಡಿ ತೆಗೆದುಕೊ ’ ಎಂದು ಹೇಳುವ ಕೈಯ-
ಬಾಯ ಧೀರರ ತ್ಯಾಗವೃತ್ತಿಯೆಲ್ಲಿ ?

ತ್ಯಾಗವೀರರ ನಾಡು ಆಸೆಬುರುಕರ ಬೀಡು
ಆಗಿಹುದು ಎಲ್ಲೆಲ್ಲು ದುಃಖ ಬೆಳಸಿ.
ತ್ಯಾಗದಿಂದಲೆ ಸುಖವು; ಯೋಗದಿಂದಲೆ ಏಳ್ಗೆ,
ಈ ರೋಗಿಗಾರು ಹೇಳುವರು ತಿಳಿಸಿ ?

‘ ನಿನ್ನ ದಾರಿಯು ತಪ್ಪು, ನಿನ್ನ ರೀತಿಯು ತಪ್ಪು ’
ಎಂಬ ಭ್ರಾಂತಿಯು ನಿನ್ನ ಗುಂಡಿಕ್ಕಿತು.
ಸಿಡಿಗುಂಡ ಸಪ್ಪಳವು ಎಚ್ಚರಿಸಿ ತೋರಿಸಿತು
ನಾಡನಾಡಿಯು ಸೋತು ನಿಂತ ಮಾತು.

೨-೯-೫೦

# ನಂಬುಗೆ

ನಂಬುಗೆಯು ನೆಚ್ಚಿಕೆಯು ಈ ಬಾಳ ತಳಹದಿಯು
    ನಂಬಲಾರದ ಬಾಳು ಬದುಕು ಎಂತು?
ನಿನ್ನನ್ನು ನೆರೆನಂಬು; ನಿನ್ನ ನಂಬಿಕೆ ಬೆಳಸು
    ನೀ ನಿನ್ನ ನಂಬದಿರೆ ಯಾವ ಬೆಲೆ ಬಂತು?

ಜಗದ ಊಳಿಗವೆಲ್ಲ ನಂಬಿಕೆಯ ಆಧಾರ-
    ದಿಂದಲೇ ಕೊನರಿ ಬೆಳೆಯುತ್ತಲಿಹುದು.
ಜಗವ ನಂಬಿದ ನೀನು ನಂಬಿಕೆಯ ಬಿಸುಟದರೆ
    ನಿನ್ನ ಬಾಳಿಗೆ ಬೆಳಕು ಎಲ್ಲಿ ಬಹುದು?

ಬೆಳಕಿರದ ಬಾಳು ತಾ ಬೆಳಕೇನು ಕೊಟ್ಟೀತು?
    ಕಳ್ತಲೆಯ ಮುಸುಕಿನಲಿ ಕಮರುತಿಹುದು.
ಎಚ್ಚತ್ತು ನೋಡೊಮ್ಮೆ ಹೊಸ ಬೆಳಕು ತೋರುವುದು
    ನಂಬುಗೆಯ ದೀಪದಿಂ ಬರುತಲಿಹುದು.

ನಂಬುಗೆಯೊಳಡಗಿಹುದು ಬಾಳಜೀವನಸತ್ವ
    ಹತ್ತಾರು ರೂಪಿನಲಿ ಮೆರೆಯುತಿಹುದು.
ದೇವಮಾನವರಲ್ಲಿ ಭಕ್ತಿಭಾವವ ತೋರಿ
    ಸತಿಪತಿಯರಲ್ಲಿಯದು ಪ್ರೇಮವಹುದು.

ಬಂಧುಬಳಗಗಳಲ್ಲಿ ವಾತ್ಸಲ್ಯವಾಗಿದ್ದು
    ಸೇವ್ಯಸೇವಕರಲ್ಲಿ ನಿಷ್ಠೆಯಹುದು.
ಯಾವ ರೂಪವು ಬರಲಿ ಸಂಬಂಧವೇನಿರಲಿ
    ನಂಬುಗೆಯು ನಿತ್ಯ ಚುಕ್ಕಾಣಿಯಹುದು.

೯-೧೧-೫೦

# ಸತ್ಯ

‘ ಸತ್ಯವೇ ದೇವರು ; ಸತ್ಯಕ್ಕೆ ಜಯ ’ ವೆಂದು
ಸಾರುತ್ತ ಬಂದಿಹರು ಎಂದಿನಿಂದ.
ಸತ್ಯವನು ಅರಿತೊ ಅರಿಯದೆಯೊ ಭ್ರಮೆಗೊಂಡೊ
ಸಾರಿದರೊ ಆ ಮಾತು ಮೋಹದಿಂದ !

ಕಾಲಕಾಲಕೆ ಹುಟ್ಟಿಬಂದ ಅನುಭಾವಿಗಳು
ಸತ್ಯದಿತ್ಯರ್ಥವನು ಮಾಡಿರುವರು.
‘ ಸತ್ಯ ಕಂಡವರಿಲ್ಲ ’ವೆಂದು ಕೆಲರುಸುರಿದರೆ
“ ಸತ್ಯ ಒಂದೇ ಒಂದು ” ಎಂದು ಹಲರು.

“ ನಾನು ಕಂಡುದೆ ಸತ್ಯ ; ಉಳಿದೆಲ್ಲವೂ ಮಿಥ್ಯ ”
ಎಂಬ ದೃಷ್ಟಿಯು ಜಗಕೆ ಪಥ್ಯವಲ್ಲ.
ಸತ್ವ ಒಂದೇ ಒಂದು ; ಸತ್ಯಕ್ಕೆ ಹಲವು ಮುಖ ;
ಮಿಥ್ಯವಾದಗಳಲ್ಲಿ ತಥ್ಯವಿಲ್ಲ.

ವ್ಯಕ್ತಿಯಲ್ಲುಂಟಾದ ಸತ್ಯದೀ ದರುಶನವು
ಸರ್ವಶಕ್ತಿಸ್ಸತ್ತ್ವ ಕಾಣಬಹುದೆ ?
ವ್ಯಕ್ತಿ ಸತ್ವದ ಅಂಶ ; ಅಂಶ ದೃಷ್ಟಿಯು ಸತ್ಯ
ಪೂರ್ಣ ಸತ್ವದ ರೂಪ ಕಾಣಬಹುದೆ ?

ಸತ್ಯದಿಣುಕಿನ ಸೋಂಕು ಆನಂದದೈಸಿರಿಯ
ತೋರಿ ಮೈಮನದರಿವ ಹಾರಿಸುವುದು.
ಅರಿವಳಿದು ಭ್ರಮೆ ಬಂದು ಮೋಹಜಾಲವ ಹರಡಿ
ಕಂಡದ್ದೆ ಸತ್ಯವೆಂದುಸುರಿಸುವುದು.

೨೫-೧೨-೫೦

# ಬೆಳೆ-ಬಾಳು!

ಬೀಳು ಮಾತಿನಕಿಂತ ಬಾಳು ಮಾತೇ ಲೇಸು
ಎಂಬ ನುಡಿ ನಡೆ ಕಟ್ಟಿ ಕೆಳೆ ಶಂಕರ!
ಬಯಲ ಬಾಳನು ದಾಟಿ ಬಾಳಬಯಲಿಗೆ ಬಂದೆ
ಹೊಸಬಾಳ ಫಲ ಬೆಳೆಸು ಕೆಳೆ ಶಂಕರ! ೧

ದಿನದಿನಕೆ ಬಗೆಯಾಗಿ ಹಲಜನರ ಸಮ್ಮಿಲನ
ಆಗುವುದು ಈ ಜಗದ ಬಾಳಿನೊಳಗೆ;
ಕೈಕುಲುಕಿ ಕುಲುನಕ್ಕು ಸಾಗಿ ಹೋಗುವರವರು
ಅವರೆಂತು ಉಳಿಯುವರು ಮನದ ಒಳಗೆ? ೨

ಮನದೊಳಗೆ ಉಳಿದವರು ಕೆಳೆಯಾಗಿ ಬಾಳುವರು;
ಕೆಳೆ ಬಾಳ ಸಮರಸದ ಭಾವಕಳೆಯು.
ಭಾವ ಜೀವನ ನಂಬಿ ಜೀವ ಭಾವವ ಬೆಳೆಸಿ
ಜೀವರಸ ನೀಡುವುದು ಬಾಳಬೆಳೆಯು. ೩

ನಿನ್ನ ಕೈಯಿಗೆ ಬಂದ ಸುಖಬಾಳ ಚಿನ್ಮಣಿಯು
ಯೋಗ ಭೋಗದಿ ಪಡೆದು ಬೆಳೆದು ಬಾಳು.
ರಸಿಕತನವೆ ಬಾಳ ಹದ ತೋರ್ವ ಚುಕ್ಕಾಣಿ
ದಾರಿಗಂಬದ ಬರೆಹ ನೋಡು; "ತಾಳು" ೪

ತಾಳ್मೆ ರತಿ-ರಸ-ಭಾವ-ಪುಟವನಿಮ್ಮಡಿಸುವುದು;
ಹರುಷ ಹೆಚ್ಚಿದ ಹುರುಪು ಹಿತವೆನಿಪುದು.
ಹರುಷ ಹರೆಯದ ಕುರುಹು; ಹರೆಯು ಬಾಳಿನ ಚಿಗುರು;
'ಬೆಳೆ-ಬಾಳು' ಎಂಬುದೆ ಹರಕೆಯುಹುದು. ೫

೧-೩-೫೧

# ಕಲೆಗಾರ

ಜಗದ ಜೀವನ ತಿಳಿದು ಜನಕೆ ಜೀವವ ಕೊಡುವ
ಕಲಿಯಲ್ಲವೆ ನೀನು ಕಲೆಗಾರನೆ ?
ಬದುಕಿ ಬಾಳುವ ಹದದ ಹಿಡಿತ ತೋರುವ ಗುರುವು
ನೀನಲ್ಲವೆ ಬಾಳ ಬಗೆಗಾರನೆ ?

ನಿನ್ನ ಮೈ - ಮನ - ಬುದ್ಧಿ ಬಾಳನೆರಳಿನ ಹರಹು
ನೀಡಲಿಕೆ ಅಲ್ಲವೆ ಕಲೆಗಾರನೆ ?
ನಿನ್ನ ಬಾಳನು ಹುರಿದ ಅನುಭವದ ಪಾಠಗಳು
ಅರಿವ ಸಾಧನವಲ್ಲೆ ಬಗೆಗಾರನೆ ?

ಕೈಚಾಚಿ ಬಾಯ್ದೆರೆದು ಬೇಡು ಜೀವನ ಸಲ್ಲ,
ಹರಸಿ ಕುಡಿ ಕೊನರಿಸಲು ನೀಡು ಬಾಳು.
ಬೇಡಿ ಬಾಳುವ ಕೈಗೆ ಜೀವದಾನದ ಶಕ್ತಿ
ಬರದು ; ನೀ ತೋರಿಸೆಲೆ ಸತ್ವಬಾಳು.

ಬಾಳ ಸತ್ವವ ಸವಿದು ಬಾಳ್ಗೆ ಸತ್ವವ ನೀಡು,
ಬಚ್ಚಿಡುವ ಜಿಪುಣತನ ದೂರ ಮಾಡು.
ಕೊಟ್ಟಷ್ಟು ಕೊನರುವುದು ; ಕೊರಡು ಚಿಗುರಾಗುವುದು
ಬಚ್ಚಿಟ್ಟ ಬಾಳೆಲ್ಲ ಕೊರಡು, ಬರಡು.

ಜನಹಿತವೆ ಗುರಿಯೆಂದು ತನುಹಿತವ ಮರೆಯದಿರು ;
ತನುವು ಸತ್ವದ ತಾಣ, ತಿಳಿದು ನೋಡು.
ತತ್ವ ಸಾಧ್ಯದ ಮಾತು ; ತನುವು ಸಾಧನರೂಪು
ಸತ್ವಸಾಧನವರಿತು ಕಾರ್ಯಮಾಡು.

೫-೧-೫೧

# ಗಮಕಿ

ಕಾವ್ಯಗರ್ಭದೊಳಡಗಿ ಹುದುಗಿರುವ ರಸಭಾವ
ಸವಿಯೂಟ ಮಾಡಿಸುವೆ ನೀನು ಗಮಕಿ.
ಶಬ್ದ ತನ್ನರ್ಥವನು ತಿಳಿಯಾಗಿ ತೋರದಿರೆ
ರಾಗಮಾಲಿಕೆಯಿಂದ ತೋರ್ವೆ ಗಮಕಿ. ೧

ಸಾಹಿತ್ಯ ಸೌರಭಕೆ ಸಂಗೀತ ಜತೆ ಮಾಡಿ
ಸೋದರದ ಸಾಮರ್ಥ್ಯವನು ತೋರುವೆ.
ಭಾವ ಬಂಧದ ಗುಟ್ಟು ರಾಗಾನುಕಂಪದಿಂ
ಬಿಡಿಸಿ ಕಲೆಗಳ ಕೆಳೆಯು ನೀ ಸಾರುವೆ. ೨

ಕವಿಯ ಹೃದಯವನರಿವ ಹೃದಯುಕವಿ ನೀನಾಗಿ
ರಾಗ ನವರಸಗಳನು ತಿಳಿದ ನೀನು
ಕವಿಗಿಂತಲೂ ಮಿಗಿಲು; ಗಾಯಕನಿಗೂ ಹಿರಿಯು;
ನವ ಭವ್ಯ ಕಲೆಗಾರನಾದೆ ನೀನು. ೩

ನಿನ್ನ ಬಗೆ ಅರಳದಿರೆ ಕವಿ ರಚನೆ ಗವ್ವರದ
ಮೂಲೆ ಹಿಡಿದಿಹ ಮಣಿಯು ದೀಪದಂತೆ
ಹೋಗಿ ನೋಡುವರಿಲ್ಲ; ಬೆಳಕ ಕಾಂಬವರಿಲ್ಲ;
ನಿನ್ನ ಇನಿದನಿಯೊಂದೆ ದಾರಿಯಂತೆ. ೪

ನಿನ್ನ ದನಿಯಿಂಚರದಿ ಕವಿಯುಮರನಾಗುವನು;
ಬೆಳಕು ತೋರಿದ ನೀನು ಅಮರನಲ್ಲೆ?
ಬೆಳಕು ಬೆಳಕನು ತೋರೆ ಹೊಸ ಬೆಳಕು ಹುಟ್ಟುವದು;
ಅದು ಜಗದ ಬಾಳ ಸಾರ್ಥಕ್ಯವಲ್ಲೆ? ೫

೬-೧-೫೧

# ಸತ್ವಸಾಧನ

ಸತಿಪತಿಯರಂತೆ ಈ ಸತ್ವಸಾಧನ ಜತೆಯು
ಮಿಲನದಿಂದೆ ಅದರ ಮೆರಗು ಬೆಳೆಯು.
ಸತ್ವ ಮಾತೃಸ್ಥಾನ; ಸಾಧನವು ದುಡಿವ ಕೈ
ಕ್ಷೇತ್ರ ಕರ್ತೃಗಳಂತೆ ಬಾಳ ಕೆಳೆಯು.

ಸತ್ವ ಸಾಧನಗಳಲಿ ಹೊಂದಿಕೆಯು ಬೆಳೆಯದಿರೆ
ಬರಡು ಕೊರಡುಗಳಂತೆ ಅವರ ಬಾಳು.
ಸತ್ವ ಸಂಪನ್ನತೆಯು ಸಾರ್ಥಕ್ಯ ರಹಿತವೈ
ಸಾರ್ಥಸಾಧನವಿರದ ಯತನ ಹಾಳು.

ಸಾಧನದ ಜೋರಿನಲಿ ನೆರೆನಂಬಿ ಸಾಗಿದರೆ
ಗಾಳಿ ಗುದ್ದಾಟವೆ ಮಥನ ಗತಿಯು.
ಸತ್ವ ಬೆನ್ನೆಲಬಾಗಿ ಸಾಧನಕೆ ಸಂತತವು
ಪೋಷಿಸುವ ರೀತಿಯೆ ನಿಜಪ್ರಗತಿಯು.

ಪ್ರಗತಿ ಕೇವಲ ಮುಂದೆ ಇಟ್ಟ ಹೆಜ್ಜೆಯು ಎಂದು
ಮೋಹಜಾಲದ ಬಲೆಗೆ ಬೀಳಬೇಡ.
ಪ್ರಗತಿಗುಣ ಕಾಂಬುವುದು ಸಾಧಿಸಿದ ಗುರಿಯಿಂದ
ಹಿಂದು ಮುಂದಿನ ಹೇವ ತೋರಬೇಡ.

ಪದವಿರಲಿ, ಪಾತ್ರ ಭೂಮಿಕೆಯಿರಲಿ ನಡೆದಿರಲಿ,
ಜೋಡಣೆಯೆ ಜಗದಲ್ಲಿ ಜೀವದುಸಿರು.
ಸತ್ವಸಂಪನ್ನ ಸಾಧನದ ಯತನವೆ ನಿರುತ
ತೋರುವುದು ಹೊಂಬಾಳು ಬೆಳೆದ ಕುಸುರು.

೧೪-೨-೫೧

# ಮಾಸ್ತಿ

ಮೃದುಮಧುರ ಗಂಭೀರ ಭಾವದಾಗರವಾಗಿ
ಕನ್ನಡಕೆ ಜೀವರಸ ಹನಿಸುತಿರುವೆ.
ಹೃದಯವಂತಿಕೆಯಿಂದ ಬಗೆಯ ಸೆಳೆಯುವ ನೀನು
ಕನ್ನಡದ ಮನೆ-ಮನದಿ ವಾಸಿಸಿರುವೆ.

ಎದೆಯ ಜೋರಿನ ಮೇಲೆ ಬಾಳು ಸಾಗಿಸುವವಗೆ
ಭಾವದುದ್ರಿಕ್ತ ಮಾನಸದ ತೊಡಕು.
ಮಾನಸದ ಕಡಿವಾಣ ಎದೆಯ ಗೂಡಲಿ ಹಿಡಿದ
ನಿನ್ನ ಸಮ್ಯಗ್ದೃಷ್ಟಿಯಲಿ ಇಲ್ಲ ಕೆಡಕು.

ಸಮದೃಷ್ಟಿಯೆ ನಿನಗೆ ವಿಶ್ವದೃಷ್ಟಿಯ ಕೊಡುಗೆ
ವಾತ್ಸಲ್ಯವೇ ನಿನ್ನ ಜೀವದುಸಿರು.
ಶಾಂತಿರಸದಲಿ ಮಿಂದು ಸೌಜನ್ಯದಲಿ ಬೆಳೆದು
ಸಂತತದಿ ತೋರುತಿಹೆ ಬಾಳಹಸಿರು.

ಸರಸತಿಯ ಸೇವಕನು ಶ್ರೀನಿವಾಸನು ನೀನು
ಅತ್ತೆ ಸೊಸೆಯರ ಸೆಣಸು ಅರಿದು ನಿನಗೆ.
ಅರ್ಥವಿಲ್ಲದ ಮಾತು ಸ್ವಾರ್ಥ ಸಾಧಿಪ ಮಾತು
ವ್ಯರ್ಥವಾಗಿಹುದೆಂಬ ಅರಿವು ನಿನಗೆ.

ಕನ್ನಡದ ಜನಪದವು ಒಂದಾಗಬೇಕೆಂಬ
ಹಿರಿಯಾಸೆಯೀಗಳಿಗೆಯಲಿ ಫಲಿಸಲಿ!
ಅನವರತ ದುಡಿಯುತಿಹ ಆತ್ಮತೇಜದ ಮಾಸ್ತಿ
ಸ್ವಸ್ತಿ ಶ್ರೀಕರವಾಗಿ ಚಿರಬಾಳಲಿ.

೧೮-೭-೫೧

# ನಾವಿಬ್ಬರು

ಯಾವುದೋ ಗಳಿಗೆಯಲಿ ಕೂಡಿ ಬಂದೆವು ನಾವು
ಹಗಲಿರುಳು ಎನ್ನದಲೆ ನಡೆಯುತಿಹೆವು.
ನಮ್ಮ ನಡೆ ನಮಗೊಂದು ದಾರಿ ತೋರುವ ಬೆಳಕು
ಅದು ಬೆಳೆಯುತಿರಲೆಂದು ಹೆಣಗುತಿಹೆವು.

ರಸಭೇದ, ರುಚಿಭೇದ, ಭಾವ ಬಣ್ಣದ ಭೇದ
ಗಾತ್ರ ಗಂಭೀರತೆಯ ಭೇದ ಹಲವು.
ಪೂರ್ವ ಪಶ್ಚಿಮದಂತೆ ಮೊಗವೆರಡು ಕಂಡರೂ
ಅಂತರಂಗದ ಸ್ನೇಹ ಒಂದು ಬಲವು.

ಭೇದ ನೀತಿಯದಲ್ಲ; ದೃಷ್ಟಿ ವೈಭವವಾಗಿ
ಸ್ನೇಹ ಜೀವನವನ್ನು ಪೋಷಿಸುವುದು.
ಒಮ್ಮತವೆ ಬೇಕಿಲ್ಲ; ಸಮ್ಮತಿಯು ಸಾಕೆಂದು
ತಡೆಯದಲೆ ಕಾರ್ಯವನು ಸಾಗಿಸುವುದು.

ಒಂಟಿ ಜೀವನದಿಂದ ಬಂಟತನವೆಲ್ಲಿಯದು ?
ನಂಟು ಜೀವನಸಸಿಯ ತಾಯಿಬೇರು.
ಜತೆಯಿಂದ ಇಮ್ಮಡಿಯು ಕಸುವು ನೂರ್ಮಡಿ-
ಯಾಗಿ ಹುಮ್ಮಸಕೆ ನೀಡುವುದು ಏರು-ಜೋರು.

ಎಲ್ಲೆಲ್ಲಿಯೋ ಬೆಳೆದು ಅಲ್ಲಿಯೆ ಉಳಿಯದಲೆ
ಸೆಳೆತಂದು ಹೂಡುವುದು ಕೆಳೆಯ ಶಕ್ತಿ.
ಕೆಳೆಯಿಂದ ಹೊಸಬಾಳು ಚಿಗುರುವುದು; ಬೆಳೆಯುವುದು
ಪಡೆಯುವುದು ಅದರಿಂದ ಬಾಳು ಮುಕ್ತಿ.

೧೨-೮-೫೧

# ಒಲ್ಲೆನೆ ಸಾಹಿತಿ ಗಂಡನ್ನ

ಒಲ್ಲೆನೆ ಸಾಹಿತಿ ಗಂಡನ್ನ ॥ ನಾ ॥
ಒಲ್ಲೆನೆ ಸಾಹಿತಿ ಗಂಡನ್ನ
ಹೊಟ್ಟೆಯ ಖಬರಿಲ್ಲ ಬಟ್ಟೆಯ ಅರಿವಿಲ್ಲ ॥ ಒಲ್ಲೆನೆ ॥

ಹೊತ್ತಾರೆದ್ದು ಹೊತ್ತಿಗೆ ಹಿಡಕೊಂಡು
ಮತ್ತ ತುಂಬಿಯ ಹಾಗೆ ಗುಂಯಿಗುಡುತ
ಸುತ್ತಲಿದ್ದವರನ್ನು ಕತ್ತೆತ್ತಿ ನೋಡದ
ಎತ್ತೋ ಲೆಕ್ಕವ ಹಾಕುವ ಗಂಡನ್ನ ॥ ಒಲ್ಲೆನೆ ॥

ಬೆಲೆಯಿರದ ಕೃತಿಗಳ ಬಿಡದೆ ನಿರ್ಮಿಸುತಲಿ
ನಾಳಿನ ಕೀರ್ತಿಗೆ ಕೈಯೊಡ್ಡುತ
ಬಡತನ ಬವಣೆಯು ಜ್ಞಾನ ಸಾಧನವೆಂದು
ಸಂತತ ಸಂಕಟ ಪಡುತಿಹ ಗಂಡನ್ನ ॥ ಒಲ್ಲೆನೆ ॥

ಪತಿಯೆಂದು ನಂಬಿದರೆ ಪತಿತೋದ್ಧಾರಕನಾಗಿ
ಜನದೇಶಸೇವೆಯೆಂದಲೆಯುತಲಿ
ಸತಿಗೆ ಸಂಸಾರದ ಸ್ರಾಮ್ರಾಜ್ಯ ಗುಡಿಗಟ್ಟಿ
ನುಣ್ಣಗೆ ಜಾರುವ ಸಾಹಿತಿ ಗಂಡನ್ನ ॥ ಒಲ್ಲೆನೆ ॥

೮-೮-೫೧

# ಮತಕೊಟ್ಟು ಮರುಗಬೇಡ

ಮಾತನಾಡುವ ಮೊದಲು ಮಿತಿಯಿಂದ ಬೆಲೆಯಿಹುದು
ಆಡಿದರೆ ಅದರ ಬೆಲೆ ಕಟ್ಟಿದಂತೆ.
ಮತವ ಹಾಕುವ ತನಕ ಜೀವಂತ ನೀನಿರುವೆ
ಮರುಚಣಕೆ ನಿನ್ನ ಹೆಣ ಕಟ್ಟಿದಂತೆ.

ಕೈಮುಗಿದು ಬಂದವನ ಮೊಗವನ್ನು ನೀ ನೋಡು ;
ಯಾವ ಲಕ್ಷಣವಲ್ಲಿ ಕಾಣುತಿಹುದು ?
ಹೊಳೆಯು ದಾಟಿದ ಮೇಲೆ ಮೀಸೆ ಹುರಿತೋರುವುದೊ
ಯಾವ ಕರ್ತವ್ಯದೆಡೆ ಮೂಡಿರುವುದು ?

ಕರ್ತವ್ಯಪಾಲನೆಗೆ ಬೇಕು ಕಾರ್ಯದ ಶಕ್ತಿ
ಮತವ ಬೇಡುವ ಕೈಗೆ ಉಂಟೆ ಗೆಳೆಯ?
ಬಿಡಿಬಿಡಿಸಿ ನೋಡೊಮ್ಮೆ ಹಿರಿಬೆರಳ ಹವಣವನು
ಕರಿಮೊಗದ ಗುರುತು ಅಲ್ಲಿಹುದೆ ಗೆಳೆಯ ?

ಮೊಗ ನೋಡಿ ಮಣೆಹಾಕು, ಹಣೆಗೆ ತಿಲಕವ ಹಚ್ಚು
ಹಣಕಾಗಿ ಮತಕೊಟ್ಟು ಮರುಗಬೇಡ.
ಹಣವು ಗಳಿಸಲು ಬಹುದು ; ಮತವು ಬಾರದು ಮತ್ತೆ
ಮತಕೊಟ್ಟು ಕೆಟ್ಟೆನೆಂದುಸುರಬೇಡ.

ತಿಳಿ ಬಂದ ಮಾನವನ ಮತವಿಹುದು ನಿನ್ನಲ್ಲಿ
ತಿಳಿದವನು ನೀನೆಂದು ತೋರು ಗೆಳೆಯ.
ತೂಕ ತಪ್ಪಿಸಿಕೊಂಡು ಇಂದು ಮತ ಹಾಕಿದರೆ
ಐದು ವರುಷದ ಬವಣೆ ನೋಡು ಗೆಳೆಯ.

೧೬.೧೧.೫೧

ಮೂವತ್ರು

# ಯಾರಿಗೂ ಮಾರಿಕೊಳ್ಳಬ್ಯಾಡ ಯಾರಿಗೂ

ಬಿಳಿಯ ಕುದುರಿ ಚೆನ್ನ ಏರಿ
ಉಂಡು ತಿಂದು ಜೋಲಿ ತೇಲಿ
ಮರುಳು ಬಂದು ಮಾರು ಹೋಗಿ ನಿನ್ನ ಮತವ ॥ ಯಾರಿಗೂ ॥

ಮತದ ಬೆಲೆಯು ತಿಳಿದುನೋಡಿ
ಹಣದ ಬೆಲೆಯು ಕಡಿಮೆ ಮಾಡಿ
ಮಾನವನ್ನು ಕಾದುಕೊಳ್ಳು; ನಿನ್ನ ಮತವ ॥ ಯಾರಿಗೂ ॥

ಮೀಸೆ ಬಂದ ಪ್ರೌಢ ನೀನು
ಗಳಿಸಿ ಬೆಳೆದು ಬಾಳು ನೀನು
ಹೇಸಿ ಹಣಕೆ ಆಸೆ ಮಾಡಿ ನಿನ್ನ ಮತವ ॥ ಯಾರಿಗೂ ॥

ಆಳು ನೋಡು; ಅರ್ಥಬೇಡ
ಕಾಳು ಆರಿಸು; ಜೊಳ್ಳುಬೇಡ
ಮಾತಿಗಾಗಿ ಸೋತು ಬಿದ್ದು ನಿನ್ನ ಮತವ ॥ ಯಾರಿಗೂ ॥

ಪಕ್ಷ ಪಂಥ ಇರಲಿ ಬಿಡಲಿ
ದೇಶ ಹಾನಿ ಆಗದಿರಲಿ
ಮೋಸ ಬಿದ್ದು ಘಾತ ಮಾಡಿ ನಿನ್ನ ಮತವ ॥ ಯಾರಿಗೂ ॥

ಯಾರ ಮಾತು ಕೇಳಬೇಡ
ನಿನ್ನ ಮತವ ಬಿಡಲು ಬೇಡ
ಮತವ ಕೊಟ್ಟು ದೇಶ ಉಳಿಸು; ನಿನ್ನ ಮತವ ॥ ಯಾರಿಗೂ ॥

೨೪-೧೧-೫೧

# ಯಾರು ಹಿತವರು ನಿನಗೆ

ಯಾರು ಹಿತವರು ನಿನಗೆ ಮೂವರೊಳಗೆ
ಸತ್ತೆಯೊ ಸಾಧಕನೊ ಬಹುವಿಧದ ಸೋಗೊ ॥ ಯಾರು ॥

ಸತ್ತ ಗಾಂಧಿಯ ಹೆಸರು ಗುರಿಯು ಸಾಧನೆಗಾಗಿ
ಹೊತ್ತು ಬಂದಂತೆಲ್ಲ ಬಳಸುವವರು
ಮತ್ತ ಮೈಯಿಗೆ ಬಿಡದೆ ಖಾದಿಯನು ಬಿಗಿಯುತ್ತ
ಕತ್ತಲೆಯ ಕಾಯಕವ ಸಾಗಿಸಿದ ಸತ್ತೆಯೊ ॥ ಯಾರು ॥

ಸಾಧಕನು ತಾನೆಂದು ಸಮತೆಯೆ ಗುರಿ ಎಂದು
ಬೋಧಿಸುವ ಹದವುಳ್ಳ ಬಡಪಾಯಿಯು
ಬೋಧಭಾಷೆಯ ಮರೆತು ಗುರಿಯು ಗಾಳಿಗೆ ತೂರಿ
ಕದ್ದು ನುಂಗುವ ಭಂಡ ಕಾರ್ಯಸಾಧಕನೋ ॥ ಯಾರು ॥

ಇಂದೊಂದು ಪಕ್ಷವೆಂದುಸುರಿ ಮರುದಿನವದರ
ಗೊಂದಲವೆ ಬೇಡೆಂದು ಬದಲಿಸುವನ
ಮಂದಬುದ್ಧಿಯ ಮಾತು ನಂಬಿಕೆಗೆ ಬರಬಹುದೆ
ಹೊಂದಿಕೆಯು ಆಗುವುದೆ ಬಹುವಿಧದ ಸೋಗು ॥ ಯಾರು ॥

ನಿನ್ನ ಹಿತ ಮತದಾರ ನಿನ್ನ ಕೈಯಲಿ ಇಹುದು
ಮುನ್ನ ನೋಟದ ಅರಿವಿನಿಂದ ನೋಡು
'ಚಿನ್ನ'ದಂತಹ ಮಾತು ಒಳಹೊಕ್ಕು ಒರೆಹಚ್ಚು
ನಿನ್ನ ಮುಷ್ಟಿಯಲಿರುವ ಮಹತಿ ತೋರು ॥ ಯಾರು ॥

ದೇಶಸೇವೆಯೆ ತನ್ನ ಗುರಿಯೆಂದು ತಿಳಿದಿರುವ
ದೇಶರಕ್ಷಕರನ್ನು ಅಳೆದು ನೋಡು
ದೇಶರಕ್ಷಕರೆಂದು ಸಿರಿಸೋಗಿನಲಿ ಮೆರೆವ
ದೇಶಭಕ್ಷಕರನ್ನು ತರಿದು ತೋರು ॥ ಯಾರು ॥

೧-೧೨-೫೧

# ಎಚ್ಚರದ ಮಾತು ಕೇಳು

ಮಾತು ಕೊಡುವ ಹುರಿಯಾಳು ನೀನು
ನೋಡೊಮ್ಮೆ ನಮ್ಮ ಕಡೆಗೆ.
ಉಂಟೆ ದುಃಖ ದುಮ್ಮಾನ ಭೀತಿ
ಬವಣೆಗಳ ಅರಿವು ನಿನಗೆ ?

ನಿನ್ನ ಎದೆಯ ಕೋಟೆಯನು ಬಿಚ್ಚಿ
ನೋಡಿಹುದು ಏನು ಒಳಗೆ ?
ನಮ್ಮ ಸೇವೆಯೋ ನಿನ್ನ ಸೌಖ್ಯ-
ವೊಲಿದಿರುವೆ ಎತ್ತ ಕಡೆಗೆ ?

" ನಿಮ್ಮ ಸೇವೆ ಮಾಡುವುದೆ ನನ್ನ
ಗುರಿ " ಯೆಂದು ಹೇಳುತಿರುವೆ.
ನಮ್ಮ ಸ್ಥಿತಿಯು ಹೀನಾದ ಗತಿಯು
ತಿಳಿಯಾಗಿ ಕಾಣುತಿಹುದೆ ?

ಹೊಟ್ಟೆ ತುಂಬದೆ ಹಸಿವು ಹಿಂಗದೆ
ಕಿಚ್ಚು ಹೆಚ್ಚುತಿಹುದು.
ಬಟ್ಟೆ ಸಿಕ್ಕದೆ ಮೈಯು ಮುಚ್ಚ-
ದವಮಾನವಾಗುತಿಹುದು.

ಇರಲು ಮನೆಯು ಬೇಕೆಂಬ ಮಾತು
ನಿನಗೆಂತು ತಿಳಿಯಬಹುದು ?
ಮಹಲಿನಲ್ಲಿ ಮರವಟ್ಟು ಮೆರೆವ
ನಿನಗೇನು ಚುಚ್ಚಬಹುದು ?

" ತಿಳಿವು ಬಂದ ಮಾನವನು ನೀನು
ಮತ ತಿಳಿದು ನೋಡಿ ಹಾಕು "
ಎಂಬ ಕೂಗಿನಲಿ ಮರೆಗೆ ಉಳಿದ
ವಂಚನೆಯು ಮಾತು ಸಾಕು.

" ಅನ್ನದಾಹ ಹಿಂಗೀತು, ಬಟ್ಟೆ
ದೊರೆತೀತು ಇಂದು ನಾಳೆ.
ಮನೆಯು ತಾವು ಸಿಕ್ಕೀತು ಮತದಿ
ತುಸು ತಾಳ್ಮೆಯಿಂದ ಬಾಳೆ. "

ನಾಳೆ ತಾಳಿಮೆಯು ಮಾತು ನಂಬಿ
ಸೋತಿಹೆವು; ಕಾರ್ಯಮಾಡು.
ಸೋತ ಕೈಯು ಮತವೆಂದು ತಿಳಿದು
ನೀ ಮುಂದೆ ಕಾರ್ಯಮಾಡು.

ನಮ್ಮ ಸೋಲು ತರುತಿಹುದು ನಿನಗೆ
ಹೊಸ ವಿಜಯಮಾಲೆಯನ್ನು.
ನಮ್ಮ ಮೊಗಕೆ ಗೆಲು ನಗುವ ತರುವುದೇ
ನಿನ್ನ ಕೆಲಸ ಇನ್ನು.

ನಂಬಿದವರ ಕುತ್ತಿಗೆಯ ಕೊಯ್ಯದೆ-
ಚ್ಚರದ ಮಾತು ಕೇಳು.
ಹೂವ ಮಾಲೆ ಹಾವಾಗಿ ಬಂದು
ಮಾಡೀತು ಬಾಳು ಹಾಳು.

೯-೧೨-೫೧

# ಸ್ನೇಹ ಸಂಕಟ

ಸಂಕಟ ಕಾಲದ ಸ್ನೇಹವಿದು ;
ಮಂಕುಬೂದಿಯನ್ನೆರಚುವುದು.

ಮೋಸದ ಮಾಯೆಯ ಜಾಲವಿದು ;
ಆಸರ ಪಡೆಯಲು ಹವಣಿಪುದು.

ಮತದಾರನೆ ನೀನೆಚ್ಚರಿರು !
ತಿಳಿವಿನ ಕಣ್ಣನು ಮುಚ್ಚದಿರು !

ಸ್ನೇಹದ ಸಂಕಟ ಇದಕಿಲ್ಲ.
ಬೆಳೆಯುವ ಚಿಂತೆಯು ಅದಕಿಲ್ಲ.

ಸಂಧಿಯ ಸಾಧಿಪ ಕೈಗೋಲು ;
ದಾಟಿದ ಮೇಲದು ಕುಡುಗೋಲು.

ಕೂರಸಿ ಗೆಳೆತನವೆಂತಹದು ?
ಕಾಲನ ಅಪ್ಪುಗೆಯಂತಹದು.

ಇಂತಹ ಗೆಳೆಯರು ಬೇಡೆಮಗೆ ;
ಕೆಳೆ ಸೋಗಿನಲಿಹ ನೀಚ ಹಗೆ.

ನಮ್ಮ ಮತವು ನಮ್ಮೆಡೆಯಿರಲಿ ;
ಬಂದಿಹ ಆಯ್ಕೆಯು ಸಾಗಿರಲಿ.

೧೬-೧೨-೫೧

# ಮತದಾರನ ಇತಿಮಿತಿ

ಪಂಡಿತರ ಮಂಡನೆಯ ಮಾತನ್ನು ಕೇಳಿದರೆ
ನನ್ನ ಮತ ಒಲಿಯುವುದು ಕಾಂಗ್ರೆಸಿಗೆ.
ಕಾಂಗ್ರೆಸ್ಸ ಹುರಿಯಾಳ ಕಣ್ಣಾರೆ ನೋಡಿದರೆ
ಮತಮುದುಡಿ ಹೋಗುವುದು ಮನಗಟ್ಟಿಗೆ.

“ವ್ಯಕ್ತಿ ನೋಡಲು ಬೇಡಿ; ಪ್ರತಿನಿಧಿಯ ಮರೆಗಿದ್ದ
ಹಿರಿಯ ಸಂಸ್ಥೆಯ ನೋಡಿ ಮತವಕೊಡಿರಿ”
ಇಂಥ ಜನಗಳ ಸಂತೆ ಸಂಸ್ಥೆ ಹೆಸರನು ಕೆಡಿಸಿ
ಗೋರಿ ಕಟ್ಟುವರಲ್ಲ! ಮಾತು ಕೊಡಿರಿ.

ಕಂಗಾಲನಾದವಗೆ ಬಂಗಾರದೀ ಮಾತು
ಆರಿಕೆಯ ಬಾಯಿಯನು ಹಸಿಯಿಸುವುದು.
ಹಸಿದ ಬಾಯಿಯ ನೀರು ಕಂಗಳಿಗೆ ಬರದಂತೆ
ಮಾಡೆಂದು ಗೋಳಿಟ್ಟ ಬೇಡಿಕೆಯಿದು.

ಅತ್ತ ನೋಡಲು ಒಲ್ಲೆ; ಇತ್ತ ನೋಡಲು ಒಲ್ಲೆ
ಕಣ್ಮುಚ್ಚಿ ಮತವನ್ನು ಹಾಕಿಬಿಡುವೆ.
ಬುದ್ಧಿ ಬವಣೆಯ ಬಡಿಸಿ ಇತಿಮಿತಿಗೆ ಗುರಿಪಡಿಸಿ
ಕೊಲ್ಲುವುದು; ಎದೆಯಿಂದ ಹಾಕಿಬಿಡುವೆ.

ಬುದ್ಧಿಭಾವದ ತೊಡಕು ಯಾರಿಗೂ ಬಿಟ್ಟಿಲ್ಲ;
ಭಾವಕ್ಕೆ ಎಂದಿಗೂ ಗೆಲುವ ದಾರಿ.
ಇಂದಿನೀ ತೊಡಕಿನಲಿ ಒಳಭಾವ ಮುಂಬಂದು
ಪಾರುಮಾಡಲಿ ಜನವ ದಾರಿತೋರಿ.

೨೩-೧೨-೫೧

## ಆಳ್ವಮಾತು ಆಡು

ಮೂಡುರಂಗದಲ್ಲಿ ಬೆಳಗುತಿಹಳು ನಮ್ಮ ಭಾರತಿ ;
ನಾಡಕೂಟದಲ್ಲಿ ಮೆರೆಯುತಿಹಳು ನಮ್ಮ ಭಾರತಿ ;
ಸಾವಿರಾರು ವರುಷದಿಂದ ಬೆಳೆದು ಬಂದ ಸಂಸ್ಕೃತಿ ;
ಎಲ್ಲಿ ನೋಡಿದಲ್ಲಿ ಹಬ್ಬುತಿಹುದು ಅದರ ಕೀರುತಿ.

ಹಿಂದೆ ನಾಡು ತನ್ನ ಸತ್ವ ಕಳೆದುಕೊಂಡು ಕೊರಗಿತು ;
ಪರರ ಸತ್ತೆಯಲ್ಲಿ ಸತ್ವ ಕಳೆದುಕೊಂಡು ಬಾಡಿತು ;
ಅರಿವು ಬಂದು ನಿಜವ ತಿಳಿದು ಕೊಡವಿಕೊಂಡು ಎದ್ದಿತು ;
ಸತ್ವಶಕ್ತಿ ಚಿಗುರುವೊಡೆದು ಜೀವರಂಗ ಗೆದ್ದಿತು.

ಗೆದ್ದ ಮೊಗದ ನಗುವ ನೋಡು ಉಕ್ಕುತಿಹುದು ದೇಶದಿ ;
ಎದ್ದ ಜನದ ಹುರುಪು ನೋಡು ಮಿಕ್ಕುತಿಹುದು ಕೋಶದಿ ;
ಬೀಳುಮಾತು ಇನ್ನು ಬೇಡ ; ಏಳು ಆಳು ದೇಶದಿ
ಆಳ್ವಮಾತು ಆಡು ಸತತ ಸ್ವತ್ವಪಡೆದ ದೇಶದಿ.

೧೯-೧-೫೨

# ಚುಟುಕುಗಳು

ನಾನಾಳಿ ಮಾಡುವುದು ಗೆಳೆಯ ನಿನ್ನಯ ಗೌರವ;
ಜಗದ ಪರಿವೆಯು ಬೇಡ; ಕೈಗೆ ಕೈಕೊಡು ಸಾಗುವ.

— ಪುಷ್ಕಿನ್

ಪರರ ದೂಷಣೆಯೇಕೆ ಮಾಡುವುದು ಇನ್ನು;
ನೀಚ ಸ್ವಾರ್ಥವನದುಮಿ ಬಾಳುವುದೆ ಚೆನ್ನು.
ಪರರಿಂದ ನಿನಗೆಂದು ಅಳಿಗಾಲ ಬಂದಿಲ್ಲ.
ಆನೃತವೆ ಅವನತಿಗೆ ನಿನ್ನ ದೂಡಿಹುದು.
ನಿಜರೂಪ ತಿಳಿದಿಂದು ಮುದದಿಂದ ಸಾರುತಿರು:
ಸತ್ಯಕ್ಕೆ ಈ ಬಾಳು ಮೀಸಲೆಂದು.

— ದ್ವಿಜೇಂದ್ರಲಾಲ ರಾಯ

ನಮ್ಮ ಬಾಳಿನ ಅವಧಿ ಕಿರಿದು; ತ್ವರೆಮಾಡು.
ಕೊಡಮಾಡುವುದನೆಲ್ಲ ಕೊಟ್ಟುಬಿಡು; ಮಾಡು.
ನೀನಿಂದು ಗತಿಸಿದರೆ ಜಗಕೆ ಹಾನಿಯು ಹಿರಿದು;
ನೀ ಕೊಡುವುದನು ಬೇರೆ ಯಾರು ಕೊಡುವವರು?

— ರೋಮೋ ರೋಲಾಂ

# ನೆಗಳೂರ ರಂಗನಾಥರ ಕೃತಿಗಳು
# ಪ್ರಕಟವಾದುವು

| | | | |
|---|---|---|---|
| ೧. | ಬಹಿಷ್ಕಾರ | ನೀಳ್ಗತೆ: | ೧೯೪೦ |
| ೨. | ಮದುವೆ | ಶಾಸ್ತ್ರೀಯ ಗ್ರಂಥ | ೧೯೪೦ |
| ೩. | ಶ್ರೀರಂಗ | ಜೀವನಚರಿತ | ೧೯೪೧ |
| ೪. | ರಾಜ್ಯಘಟನೆಯ ಕರಡು | ಭಾಷಾಂತರ | ೧೯೪೯ |
| ೫. | ಪೂಜಾಫಲ | ಕಾದಂಬರಿ | ೧೯೪೯ |
| ೬. | ತೋರಣ ಕೈಪಿಡಿ | ಭಾಗ ಒಂದು | ೧೯೫೧ |
| ೭. | ತೋರಣ ಕೈಪಿಡಿ | ಭಾಗ ಎರಡು | ೧೯೫೧ |
| ೮. | ತೋರಣ ಕೈಪಿಡಿ | ಭಾಗ ಮೂರು | ೧೯೫೧ |
| ೯. | ಪೌರನೀತಿ | ಶಾಸ್ತ್ರೀಯ ಗ್ರಂಥ | ೧೯೫೧ |
| ೧೦. | ನಾಳಿನ ಹಂಬು | ಕವನಸಂಗ್ರಹ | ೧೯೫೨ |

# ಪ್ರಕಟನೆಗಾಗಿ ಸಿದ್ಧವಾಗಿವೆ

| | | |
|---|---|---|
| ೧. | ಚೇತರಿಸಿದ ಚೀನ | ಸಾಂಸ್ಕೃತಿಕ-ಐತಿಹಾಸಿಕ ಗ್ರಂಥ |
| ೨. | ಅಂಬಿಕಾತನಯದತ್ತ | ಜೀವನ ಚರಿತೆ |
| ೩. | ಅನಂತ ಪ್ರಶ್ನೆ | ದೇವತ್ವದ ಚರ್ಚೆಯ ಪ್ರಬಂಧಗಳು |
| ೪. | ಪಶ್ಚಿಮದ ಮಹಾಪುರುಷರು | ವ್ಯಕ್ತಿ ಚಿತ್ರಗಳು |
| ೫. | ಕನ್ನಡದ ಸೇವಕರು | ಹಿರಿಕನ್ನಡಿಗರ ವ್ಯಕ್ತಿಚಿತ್ರಗಳು |
| ೬. | ನನ್ನ ಚಿಲಿಮೆ | ನಿಬಂಧ ಸಂಗ್ರಹ |
| ೭. | ಭಾಗ್ಯೋದಯ | ಕಾದಂಬರಿ |
| ೮. | ಬಾಬೂಜಿ | ಕಾದಂಬರಿ |
| ೯. | ಕುಟುಂಬ | ಶಾಸ್ತ್ರೀಯ ಗ್ರಂಥ |
| ೧೦. | ಧರ್ಮ | ವಿವರಣಾತ್ಮಕ ವಿವೇಚನೆ |
| ೧೧. | ಬುದ್ಧದೇವ | ನಾಟಕ ( ಸಂಗೀತ) |
| ೧೨. | ಹೊಸ ಉಸಿರು | ನಾಟಕ |
| ೧೩. | ಬಿದ್ದಬಾಳು | ಆತ್ಮವೃತ್ತ |
| ೧೪. | ರಂಗಮಂಗ ಪ್ರವಾಸ | ಪ್ರವಾಸವೃತ್ತ |
| ೧೫. | ಇದು ಸಹಜವೆ? | ಕಥಾ ಸಂಗ್ರಹ |